॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀ ವಿಶ್ವನಾಥ ಗ್ರಂಥಮಾಲಾ
ಪ್ರಥಮ ಪುಷ್ಪ ೧



[ ರಸಿಕ ಜನ ಮನೋಹರವಾದ ]

# ನೀತಿ ಪದ್ಯ ಗೇಯಮಂಜರಿ

ಅಥವಾ

# ★ ಸುನೀತಿ ಸುಧೆ ★



ಕವಿಗಳು ಮತ್ತು ಪ್ರಕಾಶಕರು

ಶ್ರೀ ಷ॥ ಬ್ರ॥ ಮುರುಗೇಂದ್ರ ಶಿವಾಚಾರ್ಯ ಸ್ವಾಮಿಗಳು

ಹಿರೇಮಠ, ಕೊಣ್ಣೂರ



ಪ್ರಥಮ ಮುದ್ರಣ ಪ್ರತಿ ೧೦೦೦

卐 [ ಬೆಲೆ: ೦-೮-೦

† ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ †






ವಿಶ್ವನಾಥ ಗ್ರಂಥಮಾಲಾ
ಪ್ರಥಮ ಪುಷ್ಪ ೧

# ನೀತಿ ಪದ್ಯ ಗೇಯಮಂಜರಿ

ಅಥವಾ

# ಸುನೀತಿ ಸುಧೆ



ಕವಿಗಳು ಮತ್ತು ಪ್ರಕಾಶಕರು:—

ಶ್ರೀ. ಷ. ಬ್ರ. ಮರುಗೇಂದ್ರ ಶಿವಾಚಾರ್ಯ ಸ್ವಾಮಿಗಳು
ಕೊಣ್ಣೂರು ಹಿರೇಮಠ

೧೯೫೨ ] [ ಬೆಲೆ ೮ ಆಣೆ



ಕೊಣ್ಣೂರ ಬೃಹನ್ಮಠದ ಪಟ್ಟಾಧ್ಯಕ್ಷರಾದ

ಷ॥ ಬ್ರ॥ ಶ್ರೀ ಮುರುಗೇಂದ್ರ ಶಿವಾಚಾರ್ಯ

ಸ್ವಾಮಿಗಳವರು

ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ

# ಸದಭಿಪ್ರಾಯಗಳು

ನಿಮ್ಮ ಕವಿತಾಶಕ್ತಿ ಮುಂತಾದವುಗಳು ಅರಿಕೆಯಾಗಿ ಬಹಳ ಸಂತೋಷವಾಯಿತು. ಮತ್ತು ಅದನ್ನು ಪರಿಶೀಲಿಸಿದೆವು. ಇದನ್ನು ಅಚ್ಚುಮಾಡಿಸುವುದಾದರೆ "ಕೊಣ್ಣೂರು ಬೃಹನ್ಮಠೀಯ"ವೆಂಬ (ನಾಮಾಂತರವುಳ್ಳ) "ನೀತಿ ಪದ್ಯ ಗೇಯಮಂಜರಿ" ಎಂಬ ನಾಮಕರಣ ಚನ್ನಾಗಿದೆ.

ಕೈ. ವಾಸಿ ಶ್ರೀ ಜಗದ್ಗುರು ವೀರಭದ್ರ
ಶಿವಾಚಾರ್ಯ ಮಹಾಸ್ವಾಮಿಗಳವರು ಇತ್ಯಾಶಿಷಃ
ಜಂಗಮವಾಡಿಮಠ ಶ್ರೀಕ್ಷೇತ್ರ ಕಾಶಿ ತಾ. 5-12-45

---

ನಿಮ್ಮ ಆಶೀರ್ವಾದ ಪತ್ರವು ಚೈತ್ರ ಶು|೭ಗೆ ತಲ್ಪಿತು. ನೀವು ಈ ಲೇಖದಲ್ಲಿ ಬರೆದು ಕಳಿಸಿರುವ ಯಾವತ್ತೂ ಪದಪದ್ಯಗಳನ್ನು ನೋಡಿ ಆನಂದ ಭರಿತನಾದೆನು. ನಿಮ್ಮ ಕವಿತ್ವಗಳೆಲ್ಲ ಪರಮಾನಂದವನ್ನುಂಟು ಮಾಡುವವು. ಅದರಲ್ಲಿಯೂ 'ಜಪಿಸು ಜಪಿಸು' ಎಂಬುವ ಮಹತ್ತರವಾದ ಕವಿತ್ವವನ್ನು ನೋಡಿಯಂತೂ ಕಟುಪರಮಾನಂದವಾಯಿತು. ಆ ಕವಿತ್ವವನ್ನು ಎಷ್ಟು ರಾಗಗಳಲ್ಲಿ ಹಾಡಿದರೂ ಸಾಲದಾಗಿದೆ. ನಾವು ನೀವು ಭೆಟ್ಟಿಯಾದರೆ ತಾಸಿನಲ್ಲಿ ನಿಮ್ಮ ಮನಸ್ಸು ಸಂತೋಷ ಮಾಡಿ ಬಿಡುವೆನು; ಮತ್ತು ನಿಮ್ಮ ಮನಸ್ಸಿನ ಕೋರಿಕೆಯನ್ನು ನೆರವೇರಿಸುವೆನು. ಮತ್ತು ನಿಮ್ಮ ಕವಿತ್ವವನ್ನು ರೇಣುಕ ಜಗದ್ಗುರುಗಳ ಆಸ್ಥಾನದಲ್ಲಿಯೂ, ದೇಶ ಮಧ್ಯಗಳಲ್ಲಿಯೂ ಹಾಡುವದಕ್ಕೆ ತಯಾರು ನಡೆಸಿಯೇ ಇರುವೆನು. ಇತಿ ದೀರ್ಘದಂಡ ನಮಸ್ಕಾರಗಳು..

ಕೊಟ್ನೂರು ಕಟ್ಟೀಮನಿ ಸಂಗೀತ ವಿದ್ವಾನ್ ತಾ. ೩೦-೩-೪೭
ಕೆಂಭಾವಿಮಠದ ಚನ್ನಬಸವ ಶಾಸ್ತ್ರಿಗಳು

ಇವೆಲ್ಲವನ್ನೂ ಸೇರಿಸಿ 'ಸುನೀತಿ ಸುಧೆ' ಎಂಬ ಹೆಸರಿನಿಂದ ಪ್ರಕಟಿಸಬಹುದು. ಎಲ್ಲ ಕವಿತೆಯನ್ನೂ ತಿದ್ದುವುದರಿಂದ ಕವಿಯ ಕೃತಿಯ ಸ್ವಾಭಾವಿಕತೆ ಕೆಡುವುದರಿಂದ ಆ ಕೆಲಸವನ್ನು ಸಾಧ್ಯವಾದಷ್ಟು ನೀವೇ ಮಾಡಿಕೊಳ್ಳುವುದು ಮೇಲು. ಈ ಕೃತಿಯಿಂದ ಸಾಮಾನ್ಯ ಜನತೆಗೆ ನೀತಿವಿಚಾರವು ಸಾಧ್ಯವಾದಷ್ಟು ಮುಟ್ಟುವಂತಿದೆ.

**ಶ್ರೀ ಜಗದ್ಗುರು ಶ್ರೀ ಗಿರಿರಾಜ** श्री. ज. वा. पं. शि.
**ಸೂರ್ಯ ಸಿಂಹಾಸನಮಠ** महास्वामिनः
**ಗುಂತಕಲ್ಲ** ತಾ. ೨೦-೪-೪೯

---

ನೀವು ಕಳುಹಿಸಿದ ಪದ್ಯ ಸಂಗ್ರಹಗಳು ತಲುಪಿವೆ. ನಿಮ್ಮ ಅಭಿಪ್ರಾಯದಂತೆ ಪಂಡಿತರಿಂದ ಯಥಾ ಸಾಧ್ಯಶೋಧಿಸಲಾಗಿದೆ. "ಕವಿತ್ವಂ ದುರ್ಲಭಂ ಲೋಕೇ" ಎಂದು ಪಂಡಿತರ ಅಭಿಪ್ರಾಯವಿದೆ. ಕವಿತೆಯನ್ನು ಮಾಡುಮಾಡುತ್ತ ಅನುಭವದಿಂದ ಸುಧಾರಿಸಬಹುದು. ನಿಮ್ಮ ಸಾಹಿತ್ಯವು ಜನಹಿತವನ್ನು ಸಾಧಿಸುತ್ತ ಧಾರ್ಮಿಕ ಭಾವನೆಯನ್ನು ಸರ್ವರಲ್ಲಿ ಬೆಳೆಸಲೆಂದು ಆಶೀರ್ವದಿಸಲಾಗುತ್ತದೆ.

**ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ** इत्याशिषः
**ಮಹಾಸ್ವಾಮಿಗಳವರು ಜಂಗಮವಾಡಿಮಠ** ಇತಿ ಶಿವಂ
**ಶ್ರೀಕ್ಷೇತ್ರ ಕಾಶಿ** ತಾ. 22-5-49

---

ಕವಿಯ ಹೃದಯದ ಸಹಜವಾದ ಉದ್ಗಾರವೇ ಕವಿತೆ. ಕವಿಯ ಹೃದಯವು ಕನ್ನಡಿಯಿದ್ದಂತೆ ಕನ್ನಡಿಯಲ್ಲಿ ರವಿಯ ಕಿರಣ ಬಿದ್ದರೆ ಸಾಕು, ಕೂಡಲೇ ಅದರಿಂದ ಪ್ರತಿಚ್ಛಾಯೆ ಹೊರಬೀಳುತ್ತೆ. ಜಗತ್ತಿನ ದೃಶ್ಯಾನುಭವಗಳೆಂಬ ರವಿಕಿರಣಗಳು ಕವಿಯ ಹೃದಯದರ್ಪಣದಲ್ಲಿ ಬೀಳುತ್ತಲೆ ಅದರಿಂದ ಹೊರಡುವ ವಾಗ್ರೂಪವಾದ ಪ್ರತಿಚ್ಛಾಯೆಯೇ ಕವಿತೆ. ಲೋಕಾತಿಶಾಯಿನಿಯಾದ ಕವಿತೆಯು ಹೆಚ್ಚಾಗಿ ಪ್ರಾಕ್ತನ ಜನ್ಮಸಂಸ್ಕಾರಗಳಿಂದ ಸಂಸ್ಕೃತವಾದ ಹೃದಯದಿಂದ ಹೊರಬೀಳುತ್ತೆ. ಅದಕ್ಕೆ ವರ್ತಮಾನ ಜನ್ಮದ ವಿಶಿಷ್ಟಸಂಸ್ಕಾರವೂ ಅತ್ಯಾವಶ್ಯಕ. ಪ್ರಾಕ್ತನ ಸಂಸ್ಕಾ

ರಗಳಿದ್ದರೂ ಈ ಜನ್ಮದಲ್ಲಿ ಸರಿಯಾದ ಶಿಕ್ಷಣ ದೊರೆಯದಿದ್ದಲ್ಲಿ, ಅಂತಹ ಹೃದಯದಿಂದ ಹೊರಡುವ ಕವಿತೆಯು ಪೂರ್ಣವೆನಿಸಲಾರದು. ನೀತಿ ಸಾರವನ್ನೊಳಗೊಂಡಿದ್ದರೂ ಅದು ಪಾಂಡಿತ್ಯ ದೃಷ್ಟಿಯಿಂದ ಪಂಡಿತರ ಮೆಚ್ಚುಗೆಯನ್ನು ಪಡೆಯಲಾರದು. ಆದರೆ 'ಸಾಮಾನ್ಯರಿಗೆ ಅದರಿಂದ ವಿಶೇಷಲಾಭವಿದೆ' ಎಂಬ ಮಾತನ್ನು ಯಾರೂ ಮರೆಯಬಾರದು.

ಸುಪ್ರಸಿದ್ಧ ಲೇಖಕರೂ ಕೋಣ್ಣೂರ ಬೃಹನ್ಮಠಾಧ್ಯಕ್ಷರೂ ಆದ ಪೂಜ್ಯಶ್ರೀಷ. ಬ್ರ. ಪಟ್ಟದ ಸ್ವಾಮಿಗಳವರು ಪರಿಶ್ರಮದಿಂದ ರಚಿಸಿದ "ನೀತಿ ಪದ್ಯ ಗೇಯಮಂಜರಿ" ಅಥವಾ "ಸುನೀತಿ ಸುಧೆ" ಎಂಬ ಕೈ ಬರಹದ ಹೊತ್ತಿಗೆಯು ನನ್ನೆಡೆಗೆ ಪರಾಮರ್ಶಕ್ಕೆಂದು ಬಂದುದರಿಂದ ನನಗೆ ಅದನ್ನು ಪೂರ್ಣ ಓದುವ ಸುಯೋಗ ದೊರೆಯಿತು. ಕವಿಗಳು "ಹರವದನ ಕಂಜ ಸಂಜಾತ ವಿಶ್ವಾರಾಧ್ಯ। ಕೊರತೆಯಿಲ್ಲದೆ ಎನ್ನ ಹೃತ್ಕಮಲದಲಿ ನೆಲಸಿ। ವರಕಾವ್ಯವಿದನು ಬರೆಸಿದನಲ್ತೆ?" ಎಂದು ತಮ್ಮ ಈ ಕವಿತ್ವವು ಸಹಜವಾದುದೆಂಬುದನ್ನು ಸೂಚಿಸಿದ್ದಾರೆ. ಈ ಗ್ರಂಥವನ್ನು ಪೂರ್ಣವಾಗಿ ಓದಿದಲ್ಲಿ, ಓದುಗರು ಅವರ ಈ ಮಾತಿನ ಸತ್ಯತೆಯನ್ನು ಅನುಭವಿಸಬಹುದು. ಕವಿತೆಯು ಆದಿಯಿಂದ ಅಂತ್ಯದ ವರೆಗೆ ತನ್ನದೇ ಆದ ಶೈಲಿಯಲ್ಲಿ ಮುಂದುವರೆದಿದೆ. ಅವರು ಇತರ ಸಾಮಾನ್ಯ ಕವಿಗಳಂತೆ ಯತಿ; ಗಣ, ಮಾತ್ರಾಕ್ಷರಗಳನ್ನು ಎಣಿಸಿ ತಲೆ ತುರಿಸಿಕೊಳ್ಳಲು ಹೋಗಿಲ್ಲ. "ಛಂದೋಯತಿ ಪ್ರಾಸರೀತಿ ಗಣಕು ಕವಿತಾ। ಬಂಧವನಲಂಕಾರ ಪಟು ಭಾವರಸಗಳರಿ। ಒಂದನರಿಯದೆ ಕಾವ್ಯವು ಸುರ್ವೆಂ।" ಎಂಬುದೇ ಈ ಕವಿಗಳ ಅಗ್ಗಳಿಕೆ. ಈ ಕಾವ್ಯದಲ್ಲಿ ಯತಿಗಣಾದಿ ಛಂದೋ ಬಂಧಗಳು ಸರಿಯಾಗಿಲ್ಲದಿದ್ದರೂ ಕವಿಗಳು ಹೇಳಿಕೊಂಡಿರುವ ಅಗ್ಗಳಿಕೆಗೇನೂ ಕೊರತೆಯಿಲ್ಲ. ಒಂದನರಿಯದೆ ಬರೆಯುವದೇನು ಸಾಮಾನ್ಯವೆ?

ತಮ್ಮ ಗೋತ್ರಗುರುಗಳಾದ ಜಗದ್ಗುರು ವಿಶ್ವಾರಾಧ್ಯರಲ್ಲಿ ಕವಿಗಳಿಗೆ ಅಸ್ವಾದೃಶವಾದ ಭಕ್ತಿಯಿದೆ. ಅವರಿಗೆ ವಿಶ್ವಾರಾಧ್ಯರನ್ನು ಎಷ್ಟು ಕೊಂಡಾಡಿದರೂ ಕರೆದರೂ ತೃಪ್ತಿಯಾಗಿಲ್ಲ. ಸದ್ಯಃ ಪಂಚಾಚಾರ್ಯರನ್ನು ಕುರಿತಾದ ಆಧುನಿಕ ಅನೇಕ ಗ್ರಂಥಗಳ ಅವಶ್ಯಕತೆಯಿದೆ. ಆ

ವಾದ ಮಹಾತ್ಮರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಮಾನವರೆಲ್ಲರೂ ಇದನ್ನು ಭಕ್ತಿ ವಿಶ್ವಾಸಗಳಿಂದ ಪಠಿಸಿದ್ದಾದರೆ ನೀತಿ ಮತ್ತು ವಿಚಾರ ಬೆಳೆದು ಉದ್ಧಾರವಾಗುವುದರಲ್ಲಿ ಅಭ್ಯಂತರವಿಲ್ಲ. ಆದುದರಿಂದ ಶಿವಭಕ್ತಿ ಸಂಪನ್ನರಾದ ಪ್ರತಿಯೊಬ್ಬರೂ, ಉದಾರಮನಸ್ಸಿನಿಂದ ಈ ಪುಸ್ತಕವನ್ನೋದಿ ಧನ್ಯರಾಗಬೇಕೆಂದೂ, ಮತ್ತು ಲೇಖಕರಾದ ನಮ್ಮ ಶ್ರಮವನ್ನು ಸಾಫಲ್ಯಗೊಳಿಸಬೇಕೆಂದೂ ಇಚ್ಛಿಸುತ್ತೇವೆ. ಮತ್ತು ಈ ಗ್ರಂಥಕ್ಕೆ ಸಹಾಯ ಮಾಡಿದ ಪುಣ್ಯಾತ್ಮರೆಲ್ಲರಿಗೂ ಶ್ರೀ ಜಗದಾಚಾರ್ಯರು ಮಂಗಲವನ್ನೀಯಲಿ.

ಶ್ರೀಶಕೆ ೧೮೭೩ — ಗುರುಭಕ್ತರ ಮಗು

ಮಾಘ ಬ| ೧೪ — ಗ್ರಂಥಕರ್ತ





ಶ್ರೀ ಪರಶಿವ ಬ್ರಹ್ಮವು

ಓಂ ತತ್ಸತ್



† ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ †

# ನೀತಿ ಪದ್ಯ ಗೇಯಮಂಜರಿ

ಅಥವಾ

# ಸುನೀತಿ ಸುಧೆ

## ಪ್ರಥಮ ಕಲ್ಲೋಲವು



|| ಮಂಗಲಾಚರಣಂ ||

ವಾ. ಷ. ವರಕಾಶಿವಿಶ್ವನಾಥ ಲಿಂಗಮುಖದಿಂ ಪುಟ್ಟಿ ।
ಹರನಾಜ್ಞೆಯಿಂದ ವೀರಶೈವಮತವಂ ಸೃಜಿಸಿ ।
ಹರಿಬ್ರಹ್ಮಾದಿ ಮನುಮುನಿಗಳ್ಗಷ್ಟದಿಕ್ಪಾಲ ಯಕ್ಷಕಿನ್ನರರಿಗೆ
ಲಿಂಗವ ॥

ಧರಿಸುದ್ಧರಿಸಿದ ಶ್ರೀ ಜಗದಾರ್ಯ ನಿ ।
ನ್ನೆರಡು ಪದಪದ್ಮದಲಿ ಎರಗಿನಾ ಬೇಡುವೆನು ।
ವರವಮತಿಯಮಗಿತ್ತುನುಡಿಸಿ ಬರಸೆನ್ನಿಂದಲೀ ಸಕಲ
ಸತ್ಕಾವ್ಯವಾ ॥ ೧

ಹರನೆಶಂಕರನೆ ಗಿರಿಜಾವರನೆ ಮೂಜಗವ ।
ಪೊರೆವ ದೇವರ ದೇವನೀನಲ್ಲದಿನ್ನಿಲ್ಲ ।
ಹರಿಯ ಜರುಮನುಮುನಿಗಳಷ್ಟದಿಕ್ಪಾಲಕರು ಯಕ್ಷ
ಕಿನ್ನರರಕ್ಷರೂ
ಸುರನರೋರಗರೆಲ್ಲ ನಿನ್ನಪಾದವ ನಂಬಿ ।
ಸ್ಮರಿಸಿದೊಡೆ ಕರುಣಿಸಿದೆವರವ ತುಳಸುಖದಾಮ ।
ಧರೆಯೊಳೆಮಗಿಂದೊಲಿದು ಹೃತ್ಕಮಲದಲಿ ನೆಲಸಿರಚಿಯಿಸೀ
ಸತ್ಕಾವ್ಯವಾ ॥ ೨

ಸಿದ್ಧಿದಾಯಕ ಮಹಾಬುದ್ಧಿ ಪ್ರದಾಯಕನೆ !
ಮುದ್ದುಗೌರಿಯ ಕಂದಸಿದ್ಧಗಣ ನಾಯಕನೆ ।
ಸಿದ್ಧೇಶ ಮೊದಲಾದ ಹರಿಯಜಾಮರನಾಥ ವಂದ್ಯ
ಶ್ರೀ ವಿಘ್ನೇಶ್ವರ
ಸಿದ್ಧಗಣನಾಥ ನಿನ್ನೆರಡು ಪಾದಕಮಲಕೆ ।
ಬಿದ್ದುಕರಯುಗ ಮುಗಿದು ಕೊಂಡಾಡಿ ಬೇಡುವೆನು ।
ಬುದ್ಧಿಧನವೆಮಗಿತ್ತು ನುಡಿಸೆಮ್ಮ ಬಾಯಿಂದೀ ಸಕಲ
ಸತ್ಕಾವ್ಯವಾ ॥ ೩

ಶಂಭುಶಂಕರನೊಲಿಸಿ ಯರ್ಧಾಂಗವನು ಪಡೆದು ।
ಇಂಬಯಡದಾ ತೊಡೆಯನಾಸನವ ಮಾಡಿರುವ ।
ಶುಂಭಮಹಿಷಾದಿರಕ್ಷೋವೃಂದ ಮರ್ದನಿ ಹರಿಯಜೇಂ
ದ್ರಾದಿ ಸುರರಂತೆ
ಅಂಬಿಕೇತ್ವಚ್ಚರಣ ಶಂಬರ ಜಕೆರಗುವೆನು ।
ನಂಬಿರ್ಪೆನಾಂ ಪೊರೆಯೆನಾಥನಾಥೆ ಮೃಡಾನಿ ।
ಕುಂಬಿನಿಯೊಳೆಮಗೊಲಿದು ಜಹ್ವಾಗ್ರ ಭಾಗದಿಂ ನುಡಿಯಿಸೀ
ಸತ್ಕಾವ್ಯವಾ ॥ ೪

ಶಾರದೆಯೆ ಸರಸಿಜೋದ್ಭವನ ಪ್ರಿಯಸತಿಯೇ ।
ನರರು ಜಗದೊಳಗೆಲ್ಲ ಮನ್ನಣೆಯ ಪಡೆಯುವುದು ।

ಪರಮಷ್ಟೈಶ್ವರ್ಯವಂ ಪೊಂದಿ ಸುಖವಾಗಿ ಬಾಳು
ತೀರ್ವುದು ನಿನ್ನಿಂದೇ ||
ಕರುಣದಿಂದೆಮ್ಮ ಗುಣದೋಷವನ್ನೆಣಿಸದೇ |
ಪರಿತಪಿಸುತ ಮತಿಹೀನರಾಗಿ ತಿರುಗುವೆಮಗೆ |
ವರಸತ್ಕಾವ್ಯಮಂಮಾಳ್ಪ ಕುಶಲಮತಿ ಯಮಗಿತ್ತು
ಪೊರೆಯೆ ವಾಗ್ದೇವೀ || ೧ ||

## ಕವಿಯ ನಿಜಪ್ರಶಂಸೆ

ವಾ. ಷ. ಗುರುಪಟ್ಟವಂಗಟ್ಟಿ ಕರುಣೆಯಿಂ ಬೋಧೆಮಾಡಿ |
ಮರುಳನುಂ ಮುಗ್ಧನುಂಬಾಲನುಂ ಜಡಮತಿಯು |
ನರತನುಪಾಮರನು ಗುಣಹೀನನಿವನೆಂದು ಜರೆಯದೇ
ಪ್ರೇಮದಿಂದೇ ||

ಹರವದನಕಂಜ ಸಂಜಾತ ವಿಶ್ವಾರಾಧ್ಯ |
ಕೊರತೆಯಿಲ್ಲದೆ ಎನ್ನ ಹೃತ್ಕಮಲದಲಿ ನೆಲಸಿ |
ವರಕಾವ್ಯವಿದನು ಬರೆಸಿದನಲ್ತೆ ಎನ್ನ ವಿದ್ಯಾ ಬುದ್ಧಿ
ಶಕ್ತಿಯಲ್ಲಿಂ || ೨ ||

ಎಲ್ಲವನು ಅತನೇ ಬಲ್ಲನಲ್ಲದೆ ಬೇರೆ |
ಬಲ್ಲವರನಾಕಾಣೆ ಪೊಡವಿಯೊಳಗೆಲ್ಲೆಡೆಗೆ |
ಬಲ್ಲವಂಗುರುತರದ ವಲ್ಲಭನು ತಾನಾಗಿ ಸಲ್ಲೀಲೆ
ನಡೆಯಿಸಿರ್ಪಂ ||

ಬಲ್ಲರುಂಬಲ್ಲರಂತಿರ್ಪ ಬಾಲಿಶಚಯಂ |
ಇಲ್ಲಿಸತ್ಕಾವ್ಯದಲಿ ಕುಲ್ಲದೋಷೋತ್ತಾಪ |
ಸೊಲ್ಲಿದೊಡೆ ಕಾಶಿವಿಶ್ವಾರಾಧ್ಯ ಗುರುಚಂದ್ರನೆಲ್ಲ ಪರಿ
ಹರಿಸಿ ಪೊರೆವಂ || ೩ ||

ಛಂದೋಯತಿ ಪ್ರಾಸರೀತಿ ಗಣಸು ಕವಿತಾ |
ಬಂಧವನಲಂಕಾರ ಪಟುಭಾವ ರಸಗಳಲಿ |
ಒಂದನರಿಯದೆ ಕಾವ್ಯವು ಪೂರ್ವನೆಂಬುದು ಗುರೂನ್ನತ
ಪಾದ ಕೃಪೆಯಲ್ಲವೆ? ||

ಎಂದೆಂದು ವಿದ್ಯಾವಿಲಾಸಗಳ ನಾನರಿಯೆ ।
ಮಂದಮತಿ ಮತ್ತು ಬುಧವೃಂದ ಸಹವಾಸವಿರೆ ।
ಕುಂದುಗಳು ಪೋಕೆವಿಶ್ವಾರಾಧ್ಯ ಗುರುವಾದ ಗುರು
ಕೃಪಾ ಶೋಭೆಯಿಂದೆ ॥ ೮ ।

ಕಂ॥ ಹರ ಸಮಯಾಬ್ಧಿ ಸುಧಾಕರ ।
ಪರತರ ಸ್ಕಂದ ಪಾವನಾನ್ವಯ ಜಾತಂ ॥
ವರ ಗುರು ಮುರುಗೇಶಾಖ್ಯಂ ।
ಪರಮ ಕೊಣ್ಣೂರ ಹಿರೆಮಠದ ಪಟ್ಟಾಧ್ಯಕ್ಷಂ ॥ ೯

ಭಾ-ಷ॥ ಹರನ ಕರುಣಾ ಬಲದಿ ನೀ ಕೃತಿ ।
ಯೊರೆದು ಸಜ್ಜನ ಹಿತಕೆ ತಿಳಿ ಗ- ।
ನ್ನಡದೆ ಷಟ್‌ಪದಿ ವಿವಿಧ ಪದ ಪದ್ಯಾವಳಿಗಳಿಂದ ॥
ವರ ವಿರತ ಪರಿ ಪೂಜ್ಯ ಚರಣಾ ।
ಶರಣಾ ಶರಣ ಜಗದ್ಗುರೂತ್ತಮ ।
ಪರಮ ವಿಶ್ವಾರಾಧ್ಯ ಪದಕರ್ಪಿಸಿದೆನಾದರದಿಂ ॥ ೧೦

ಕಂ ॥ ಜಗದೊಳಗೀ ಸತ್ಕಾವ್ಯಂ ।
ಜಗದೊಳಗಿನ ಜನರಿಂಗೆಲ್ಲ ಸದ್ಬುದ್ಧಿಯನುಂ ॥
ಬೇಗನೆ ತಪ್ಪದೆ ಕೊಡುತಂ ।
ಜಗದೊಡೆಯನ ದಯದಿ ಸತತ ಬಾಳಲಿ ದಬ್‌ ನಲ್‌ ॥ ೧೧

— ವಿಶ್ವಾರಾಧ್ಯರನ್ನು ಕುರಿತು ಪ್ರಾರ್ಥನಾ —

ಶ-ಷ॥ ಗುರುವೇ ಬಾ! ಬಾ!! । ಧರಣಿಗೆ ನಿನ್ನಯ ।
ಕರುಣೆಯ ಬೀರಲು ಬೇಗನೆ ಬಾ! ॥
ಶರಣಾಗತರನು । ಪೊರೆಯಲು ತೀವ್ರವೆ ।
ದುರುಳರ ಬಾಧೆಯ ಬಿಡಿಸಲು ಬಾ! ॥ ೧
ಚಿನ್ನದ ಭಾರತ । ಸಣ್ಣಾಗುತ್ತಿದೆ ।
ಬನ್ನವ ಬಿಡಿಸಲು ವೇಗದಿ ಬಾ! ॥
ಚೆನ್ನಿಗ ನಿನ್ನಯ । ಸನ್ನುತ ಭಕ್ತರ ।
ಮನ್ನಣೆಯಿಂದಲಿ ಪೊರೆಯಲು ಬಾ! ॥ ೨

'ಹರಹರ' ಎನ್ನುತ । ತರಹರಿಸುತ್ತಿಹ ।
ಭಾರತವಾಸಿಯ ರಕ್ಷಿಸೆ ಬಾ! ॥
ಪರಿಪರಿಯಿಂದಲಿ । ಮರಮರ ಮರುಗುವ ।
ಪರತರಶಿಷ್ಯರ ಸಲಹಲು ಬಾ ! ॥ ೩ ॥
ವೇದವ ಮನ್ನಿಸಿ । ವಾದವ ಮಾಡುವ ।
ಸಾಧುಜನರ ಕಾಪಾಡಲು ಬಾ! ॥
ವೇದಾರ್ಥಗಳನು । ರಕ್ಷಿಸಿ ಲೋಕಕೆ ।
ಬೋಧವ ಮಾಡಲು ಬೇಗನೆ ಬಾ! ॥ ೪ ॥
ಅರಿತು ದುರ್ವಾದವ । ಹರಡುವ ಪುಂಡರ ।
ಗರ್ವವ ಕಳೆಯಲು ತ್ವರಿತದಿ ಬಾ! ॥
ವ್ಯರ್ಥವೆ ನಿಂದಿಸಿ । ಸ್ವಾರ್ಥವ ಬಯಸುವ ।
ದುರ್ಜನಕೆ ಶಾಸನಮಾಡ ಬಾ! ॥ ೫ ॥
ಹಂಚಿಕೆಯಿಂದಲಿ । ಲಂಚವ ತಿನ್ನುತ ।
ವಂಚಿಪರನು ನಾಶಮಾಡಲು ಬಾ! ॥
ಹೊಂಚನು ಹಾಕದ । ಲಂಚವ ತಿನ್ನದ ।
ಮಂಚಾಜನರನು ಪೋಷಿಸ ಬಾ! ॥ ೬ ॥
ವಿಶಾರದ ಜನಕೆ । ಕುಶಲದಿ ಬೇಗನೆ ।
ಸುಶೀಲಮತಿಯನ್ನೀಯಲು ಬಾ! ॥
ವಿಶ್ವದ ಜನಂಗೆ । ಈಶ್ವರ ನೀನೇ ॥
ಶಾಶ್ವತ ಸುಖವನ್ನೀಯಲು ಬಾ! ॥ ೭ ॥



## — ಶಿವದೀಕ್ಷಾ ವಿಷಯ —

ದೀಕ್ಷೆಯಿಂದಲಿ ಶರೀರ ಶುದ್ಧಿಯು ।
ದೀಕ್ಷೆಯಿಂದಲಿ ಧರ್ಮಾಕರ್ಷನು ।
ದೀಕ್ಷೆಯಿಂಪಲಿ ಕರ್ಮಕಧಿಪತಿ ।
ದೀಕ್ಷೆಯಿಂದಲಿ ಶಿವಪ್ರಸನ್ನನು ॥ ೧ ॥

ದೀಕ್ಷೆಯಿಂದಲಿ ಜ್ಞಾನವುದಯವು
ದೀಕ್ಷೆಯಿಂದಲಿ ಪಾಶನಾಶವು ।
ದೀಕ್ಷೆಯಿಂದಲಿ ಪರಮಮನ್ನಣೆ ।
ದೀಕ್ಷೆಯಿಂದಲಿ ಮೋಕ್ಷಕಧಿಕಾರಿ

೬

## — ರುದ್ರಾಕ್ಷ ವಿಷಯಂ —

ಭೋ-ಷ। ಅರಿತು ಸರ್ವಾವಯವಗಳ್ । ಪರವು ಭಸ್ಮಧರಿಸುವಂತೆ ।
ರುದ್ರಾಕ್ಷಿಗಳ ಧರಿಸಬಲ್ಲಡಾತರುದ್ರನು ॥ ಪಲ್ಲ ॥
ಮಾರಮಥನ ತ್ರಿಪುರದಹನ । ಸಮಯದೊಳು ನೋಡೆನಯನ ।
ವಾರಿಬಿಂದುಬೀಳಲು ದಯವಾಗಿ ಮರ್ತ್ಯದ ॥
ಘೋರಪಾಶ ಕಂಗಳನ್ನು । ಹರಿಸಿ ಭಕ್ತಜನರೊಳೊಪ್ಪಿ ।
ತೋರುತಿರ್ಪರುದ್ರಾಕ್ಷಿಯು ನಿತ್ಯಪೂಜ್ಯವು ॥ ೧ ॥
ಸ್ಮರಿಸೆಮರಿತ ಹವುದೀಕ್ಷಿ । ಸಕ್ಲಕರ್ಮವಳಿವುದೊಲಿದು ।
ಸ್ಪರ್ಶವನು ಮಾಡೆ ಜನ್ಮದ ಪಾಶವರಿವುದು ॥
ಅರಿದುಧರಿಸೆ ರುದ್ರಪದವಿ । ಧರಿಸಿಜಪಿಸೆ ಸದ್ಯೋನ್ಮುಕ್ತಿ ।
ಪರಮವೀರಶೈವ ಮತಕ್ಕತಿ ಭೂಷಣವೂ ॥ ೨ ॥
ಕರದಲಿಬಾಹು ಕಂಠದಲಿ । ಕರ್ಣದಲಿ ಎದೆಯಲಿಉತ್ತ- ।
ಮಾಂಗದಲಿಶಿಖೆಯ ಮೂಲದಲಿ ವಿಸ್ತರಿಸಿ ಮನೋ- ॥
ನುರಾಗದಿಂತಿಳಿದುನೋಡಿ । ಯಾಗವೋಕ್ತದಿಂದ ಧರಿಸಿ- ।
ದಾತನವನೇ ಜಗದೊಳು ಸತ್ಯನಿತ್ಯನೂ ॥ ೩ ॥
ಎಸೆವಹಲವು ಮುಖದಭೇದ । ವರಿದುಧರಿಸೆ ಬ್ರಹ್ಮಹತ್ಯ ।
ಪಿತೃಹತ್ಯ ಭ್ರೂಣಹತ್ಯ ಪಾಪನಾಶನವು ॥
ಎಸೆದು ಚಿತ್ತಶುದ್ಧಿಯಿಂದ । ಜಪಿಸಿದಾತ ರುದ್ರನೆಂದು ।
ವಸುಧಿಯೊಳಗೆ ಸಾರುತಿಹುದು ವೇದವಾಕ್ಯವು ॥ ೪ ॥
ಪರಮಶಿವನ ಪರಬ್ರಹ್ಮ । ಶರೀರದಿಂದಲಿ ಕಡೆಗಾಗಿ ।
ಪರಮಪುಣ್ಯ ಪೂಜ್ಯಮಾತೆಯನರಿಯೊಪ್ಪುವಾ ॥

ಶರಣಜನರ ಮನೋವೃತದಿ । ಸುರುದ್ರಾಕ್ಷಿಗಳನು ಧರಿಸಿ ।
ರುದ್ರಲೋಕ ಹೊಂದಿದೆನು ಹರುಷದಿಂ ಶಿವನೇ ॥ ೫ ॥



## — ಜ್ಞಾನಕರ್ಮಗಳ ಅವಶ್ಯಕತೆ —

ಜ್ಞಾನಕರ್ಮಗಳೆರಡು ಸಾಕು ಮುಕ್ತಿಗೆ ।
ಮುಕ್ತೀನು ಬೇಕು ಮರುಳ ಮಾನವನೇ ॥ ಪಲ್ಲ ॥
ಪಿತಮಾತೆ ಸತಿ-ಸುತರಗಲಿರ ಬೇಡಾ ।
ಯತಿಯಾಗಿ ಅರಣ್ಯ ಸೇರಲಿ ಬೇಡಾ ॥
ಶತನೇಮವಮಾಡಿ ದಣಿಯಲಿ ಬೇಡಾ ।
ಗುರುವಿಲ್ಲದವಗೆ ಗತಿಯಿಲ್ಲ ಮೂಢಾ ॥ ೧ ॥
ಅಷ್ಟಾಂಗಯೋಗಮಾಡಿ ಸೊರಗ ಬೇಡಾ ।
ಕಪಿಯ ಹಾಗೆ ನೀನು ತಿರುಗಲಿ ಬೇಡಾ ॥
ಉಪಮೆ ಹರಟೆಯನ್ನು ಕಲಿಯಲಿ ಬೇಡಾ ।
ಕುಟಿಲತರ್ಕದಲಿ ಫಲವಿಲ್ಲ ಮೂಢಾ ॥ ೨ ॥
ಹೊನ್ನುಹೆಣ್ಣುಮಣ್ಣು ಜರಿಯಲಿ ಬೇಡಾ ।
ಅನ್ನವಸ್ತ್ರವನೀ ತೊರೆಯಲಿ ಬೇಡಾ ॥
ನನ್ನದೆಂದು ದೇಹವ ನೆಚ್ಚಲಿ ಬೇಡಾ ।
ತಣ್ಣೀರೊಳಗೆ ಮುಳುಗಿ ನಡುಗ ಬೇಡಾ ॥ ೩ ॥
ಆಯಾಸದಿ ದೇಹವ ದಂಡಿಸ ಬೇಡಾ ।
ಕಾಕುಬುದ್ಧಿಯು ಕಲಿತು ಕುಣಿಯು ಬೇಡಾ ॥
ಬಹಳ ಬಣ್ಣದಮಾತು ಕಲಿಯ ಬೇಡಾ ।
ನಿತ್ಯ ಶಿವಯೋಗ ಮಾಡದಿರ ಬೇಡಾ ॥ ೪ ॥
ಗುರುವಾಕ್ಯವ ತಪ್ಪಿ ನಡೆಯಲಿ ಬೇಡಾ ।
ಜ್ಞಾನಒಂದರಿಂದ ಫಲವಿಲ್ಲ ಮೂಢಾ ॥
ಶ್ರೀಜಗದ್ಗುರು ವೀರಭದ್ರ ಶಿವಾ- ।
ಚಾರ್ಯರ ಸ್ಮರಣೆಯನು ಮರೆಯ ಬೇಡಾ ॥ ೫ ॥

## — ಹೊಲೆಯರಾರು? ವಿಷಯಂ —

೮ ರ ಸೂ॥ಜಗದೊಳಗೆ ಮನುಜರೊಳು ಹೊಲೆಯರಾರು? ಲೌಕಿಕ ।
ರೊಳು ನಲಿನಲಿದು ಪೇಳುವೆನವರ ನಡವಳಿಯನು ॥
ಗುರುವಿನಾಜ್ಞೆಯ ಮೀರಿ ಗುರುಧನವನಪಹರಿಸಿ ।
ಗುರುವಿನೊಳ್ವೈರತ್ವದಿಂದಲಾಚರಿಸುತಿಹ ॥
ಗುರುದ್ರೋಹಿಯೆಂದೆನಿಪ ನಾನರನಚರನೆಂದು ।
ಚರಣ ಪೂಜೆಯನು ಮಾಳ್ಪವನೋರ್ವ ಹೊಲೆಯ ॥ ೧ ॥
ನಗುರೋಽಧಿಕಂ ನಗುರೋಽಧಿಕಂವೆಂದೂ ।
ಹೀಗೆ ಶಿವಾಗಮವಚನಗಳಿರಲವಂ ಮೀರಿ ॥
ಆಗುರುವಿನಂ ಕಂಡು ಮದದಿಂಕ್ಯಾಕರಿಸುತ ।
ಉಗುಳುತ್ತಿರ್ಪ ವನವನೋರ್ವನೀಚ ಹೊಲೆಯ ॥ ೨ ॥
ಒಂದುಗ್ರಾಮದೊಳು ಗುರುವಿರಲು ಶಿಷ್ಯಂತಾ ।
ಬಂದು ಗುರುವಿಂಗೆ ವಂದನೆಯನ್ನು ಮಾಡದೇ ॥
ಒಂದುಕಾಸುಸಹ ಕೊಡದೆ ನೆರೆಕೂಳನು ತಿಂದು ।
ಮಂದಬುದ್ಧಿಯಿಂದ ಹೋಗುವನೋರ್ವ ಹೊಲೆಯ ॥ ೩ ॥
ಹರಮುನಿದರೂ ಗುರುಕಾಯ್ವನೆಂಬ ಶ್ರುತಿಯಿರಲು ।
ಮೀರಿದನು ಗುರುವಂನಿಂದಿಸುತ್ತ ನರಕದೊಳ್ ॥
ಬರುವೆನೆಂದು ತಿಳಿದುನಮ್ರತ್ವದಿಂ ನಡೆಯದೆ ।
ಪರಕಾಗಿ ತಿರುಗುತಿರುವನವನೋರ್ವ ಹೊಲೆಯ ॥ ೪ ॥
ಮೊದಲೆ ಪಾಪಿಕೋಪಿ ಭ್ರಷ್ಟನಾಗಿರ್ದರೊಳ್ ।
ಹಾದಿಯಂಬಿಟ್ಟಿರ್ದು ಶಿವನಂನಿಂದಿಸುತ್ತ ॥
ನಿರ್ದಯದುರಾಚಾರಿಯೆನಿಸಿಕೊಂಡವನಾಗಿ ।
ವಿಧದಾವಗುಣಗಳಿಂ ಕೂಡಿದ ವ್ರೋರ್ವಹೊಲೆಯ ॥ ೫ ॥
ನಿರಾಪರಾಧಿಯಾದ ತನ್ನ ಗುರುವರ್ಯರನು ।
ಅರಿಯದತಿ ನಿಂದಿಸುತ ತನ್ನ ಗುಣಗಳನುಮಿಗೆ ॥
ಪೌರುಷವಮಾಡುತ ಶುನಕನಂತೆ ಬೊಗಳುತ್ತ ।
ವರದೇವಿಮಹಿಪನ ತೆರದಿಮಲಕೋರ್ವ ಹೊಲೆಯ ॥ ೬ ॥

ಇಂತಪ್ಪ ಜಂಗಮರು ಇಂತಪ್ಪ ಭಕ್ತರುಂ ।
ಸಂತೋಷದಿ ದೀಕ್ಷೆಯನತಿ ವೇಗದಿ ಪಡೆಯಲು ॥
ಚಿಂತೆಯಿಲ್ಲದೆ ಪೋಗುದು ಪೂರ್ವಪಾಪ ಫಲವು ।
ಇಂತು ಶ್ರುತಿವಾಕ್ಯರಲದನು ಮರತೋರ್ವ ಹೊಲೆಯ ॥ ೭ ॥
ಗುರುಪೋರ್ವನಿಲ್ಲದಿರೆ ಲಿಂಗಜಂಗಮವಿಲ್ಲ ।
ವರಪ್ರಸಾದಪಾದ ಜಲಶೇಷವಾವಗಿಲ್ಲ ॥
ವರಭಸಿತ ರುದ್ರಾಕ್ಷಿ ಮಹಾಮಂತ್ರವವಗಿಲ್ಲ ।
ದಿರಲವನ ಸಮರಸ ಮಾಳ್ಪವನೋರ್ವ ಹೊಲೆಯ ॥ ೮ ॥
ಶ್ರುತಿಮಾರ್ಗವ ಹಿಡಿಯದೆ ಧರ್ಮದಂತೆ ನಡೆಯದೆ ।
ಸತ್ಯವನು ನುಡಿಯದೆ ಪರೋಪಕಾರ ಮಾಡದೆ ॥
ಪರರಂಗನೆಯರನು ತಾಯಕ್ಕ ತಂಗಿಯರೆಂಗೆ ।
ಸರಿಯೆಂದು ಭಾವಿಸದೆ ರಮಿಸುವನೋರ್ವ ಹೊಲೆಯ ॥ ೯ ॥
ಇಷ್ಟುಶಾಸ್ತ್ರವ ಹೇಳಿ ನಡೆಯದಿರ್ದರೆಯವನು ।
ಭ್ರಷ್ಟಮಾದಿಗನೆಂದು ತಿಳಿದು ಸತ್ಯವೇದದ ॥
ಶ್ರೇಷ್ಠಮಾರ್ಗವ ಹಿಡಿದು ಗುರುಶಿದ್ಧಲಿಂಗನಂ ।
ಕಷ್ಟದಿ ಭಜಿಸಿದೊಡೆ ಶಿವಪದಕೊಟ್ಟು ರಕ್ಷಿಸುವ ॥ ೧೦ ॥

ಇತಿ ಪ್ರಥಮಕಲ್ಲೋಲಃ ಸಂಪೂರ್ಣ



॥ ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ ॥

## ದ್ವಿತೀಯ ಕಲ್ಲೋಲವು

### ಅನಂತ ಮನೋಜ್ಞ ವಿಷಯಗಳು

೯॥ ಕಾಶೀ ಪೀಠೇಶ್ವರ ವಿ- ।
ಶ್ವೇಶ್ವರ ಲಿಂಗೋತ್ಥವಿಮಲ ವಿಶ್ವಾರಾಧ್ಯಾ
ಪಾಶವಬೇಗನೆ ಛೇದಿಸಿ ।
ಶಾಶ್ವತ ಸುಖವನಿತ್ತು ನಮ್ಮಸಲಹೈ ದೇವಾ ೧

೬-೮॥ ಮಾತುಕೇಳದ ಪುತ್ರ ಸಿದ್ಧಿಯಿಲ್ಲದ ಮಂತ್ರ ।
ನೀತಿಯಿಲ್ಲದ ರಾಜ್ಯ ಫಲಗಳಿಲ್ಲದ ಭೂಜ ॥
ಭೀತಿಯಿಲ್ಲದ ಹೆಣ್ಣು ರೋಗನೀಡುವ ಹಣ್ಣು
ಮಾತುಯಿಲ್ಲದ ಬಾಯಿ ವ್ಯರ್ಥ ಶ್ರೀಶಿವನೇ ॥ ೧ ॥
ಪ್ರೀತಿಯಿಲ್ಲದ ನೆಂಟ ಘಾತಮಾಡುವ ಬಂಟ ।
ಜ್ಯೋತಿಯಿಲ್ಲದ ಮುತ್ತು ಸೇವೆಮಾಡದ ತೊತ್ತು ॥
ಮಾತನಾಡದ ಗೆಳೆಯ ಆಸೆಮೀರಿದ ಅಳಿಯ ।
ನೀತಿಯರಿಯದ ಪುರುಷ ವ್ಯರ್ಥ ಶ್ರೀಶಿವನೇ ॥ ೨ ॥
ಆಡಬೇಡೆಲೆ ಮನುಜ ಪಗಡೆ ಚದುರಂಗವನು ।
ಆಡುವದು ಸವಿಮಾತು ಶಿವಯೋಗಿಗಳೊಡನೆ ॥
ಮಾಡುಶಿವಗೋಷ್ಠಿಯನು ಸಾಧುಜನರೊಡನೇ ।
ಮಾಡುವದು ಲಿಂಗಪೂಜೆಯ ನಿತ್ಯ ಶಿವನೇ ॥ ೩ ॥
ನೋಡಬೇಡವು ಪರಧನ ಪರಸ್ತ್ರೀಯರನು ।
ಕೂಡಬೇಡವು ಅರಿತು ಮರತೊಮ್ಮೆ ಸ್ವಪ್ನದಲಿ ॥
ಮಾಡುವದು ಅಧ್ಯಾತ್ಮದೊಡನೆ ತತ್ಸಂಗವಂ ।
ಮೂಢರೊಡನಾಡಬೇಡವು ತಿಳಿದುನೋಡಾ ॥ ೪ ॥



ಶ್ರೀ ಕಾಶೀವಿಶ್ವನಾಥ ಲಿಂಗದಿಂದ ಶ್ರೀ ಜಗದ್ಗುರು
ವಿಶ್ವಾರಾಧ್ಯರ ಅವತಾರವು

ಕಪಟದಿ ಕಾಡುವರೆಲ್ಲ ಜಪಮಾಡೇನು ಫಲ ।
ಕುಪಿತಬುದ್ಧಿಜನ ಉಪವಾಸ ಮಾಡೇನು ಫಲ ೧೧ ॥
ಪತಿಯನಿಂದಿಸಿ ಬೊಗಳ್ವಸತಿ ವ್ರತ ಮಾಡೇನು ।
ಅತಿಥಿಎಡೆಯಲಿ ಭೇದಮಾಡಿ ಗತಿ ಬಯಸೇನು ॥
ಮಾತಾಪಿತೃಗಳ ಬಳಲಿಸಿ ಯಾತ್ರೆಮಾಡೇನು ಫಲ ।
ಘಾತಕಬುದ್ಧಿಬಿಡದೆ ಗೀತೆಯೋದೇನು ಫಲ ॥ ೧೨
ಬಲ್ಲವರ ಸಂಗವನು ಎಲ್ಲಿಯೂ ಬಿಡಬೇಡ ।
ತಕ್ಕಮಾನವರೊಡನೆ ಹೊಕ್ಕುಬಳಸಲಿ ಬೇಡ ॥
ಖುಲ್ಲಮನುಜರ ಸೀನುಕೂಡಿಕೊಂಡಿರಬೇಡ ।
ನಲ್ಲೆಯರಮಾತು ನೀನೆಚ್ಚಿ ಕೆಡಬೇಡಾ ೧೩
ವಾದಿಯ ಶ್ರಮವನು ವಾದಿಯು ಬಲ್ಲನಲ್ಲದೆ ।
ಹಾದಿಬಿಟ್ಟು ನ್ಯಾಯನಿರ್ಣಯ ಮಾಡುವ ರಾ- ॥
ಜ್ಯಾಧಿಕಾರಿಗಳೇನು? ಬಲ್ಲರವರ ಶ್ರಮವಂ ।
ಅಧಿಕಪ್ರಸವ ಬಾಧೆಬಂಜೆ ತಿಳಿಯುವದೆಂತು? ೧೪
ಜಿಹ್ವಾಗ್ರದೊಳು ಲಕ್ಷ್ಮಿವಾಸವಾಗಿಪ್ಪಳ್ಳೆ ।
ಜಿಹ್ವಾಗ್ರದೊಳು ಮಿತ್ರಬಾಂಧವ್ಯವಿಪ್ಪದೈ ॥
ಜಿಹ್ವಾಗ್ರದಲಿ ಪ್ರಾಪ್ತಿ ಬಂಧನವು ಎರಡಕ್ಕು ।
ಜಿಹ್ವಾಗ್ರದಲಿ ಮರಣಕೇಳು ಕೇಳೆಂದಾ ॥ ೧೫

---

ವರಜಿತೇಂದ್ರಿಗೆ ಸ್ತ್ರೀ ಹಂಬಲವುಂಟೆ? ।
ವರತ್ಯಾಗಿಗೆ ಹಣದ ಪರಿವೆಯುವುಂಟೆ? ॥
ವರಕವಿಗೆ ನರಕವಿಗಳ ಭೀತಿಯುಂಟೆ? ।
ಸ್ಥಿರಭಕ್ತಿಯಿಲ್ಲದ ಪೂಜೆಗೆ ಫಲವುಂಟೆ? ೧೬ ॥
ಸ್ವಾಮಿಕಾರ್ಯಕೆ ಕೇಡುಮಾಡುವರುಂಟೆ? ।
ಕಾಮಹರನ ಭಜಿಸದೆ ಫಲಸಿಗುವುದುಂಟೆ? ॥
ಕಾಮುಕನಿಗೆ ಭಯವು ನಾಚಿಕೆಯು ಮುಂಟೆ? ।
ಗ್ರಾಮಕೀಟಕರಿಗೆ ಜನರ ಪರವೆಯುಂಟೆ? ॥ ೧೬




ಜಲಸ್ನಾನದಿ ಮನಃಶುದ್ಧಿಯು ।
ಭಸ್ಮಸ್ನಾನದಿ ಪವಿತ್ರತೆಯು ॥
ಮಂತ್ರಸ್ನಾನದಿ ಪಾಪನಾಶವು ।
ಜ್ಞಾನಸ್ನಾನದಿ ಮೋಕ್ಷ ನೋಡೆಂದಾ ॥ ೧೮ ॥
ಮಂತ್ರಜಪದಿಂ ಪಾಪನಾಶವು ।
ಮೌನದಿಂದಂ ಕಲಹನಾಶವು ॥
ಕೃಷಿಕರ್ಮದಿಂ ದುರ್ಭಿಕ್ಷನಾಶವು ।
ಜಾಗ್ರತದಿಂ ಭಯನಾಶ ಕೇಳ್ಕೆ ॥ ೧೯ ॥

---

ಕಂ॥ ಪತಿಯಿಲ್ಲದ ಸತಿ ವ್ಯರ್ಥಂ ।
ಶ್ರುತಿರಹಿತ ಬುದ್ಧಿ ಅತಿ ನಿರರ್ಥಕ ನೋಡೈ ॥
ಮಾತಿಯಿಲ್ಲದ ಮಗವ್ಯರ್ಥಂ ।
ಸುತನಾಗದವಗೆ ಗತಿಯಿಲ್ಲವು ಶಿವಾಧವಾ ॥ ೨೦ ॥
ಗುರುವಿಲ್ಲದೆ ಮಾಡಿದ ಸತ್ ।
ಕರುಮವು ಫಲವನ್ನು ಕೊಡುವುದಿಲ್ಲವು ಶಿವನೇ ॥
ಸ್ವೈರಿಣಿ ಮಾಡಿದ ವ್ರತಫಲ ।
ಕಾಂಗಳಾಗವೈವರ ಶ್ರೀ ಶಿವಾಧವಾ ॥ ೨೧ ॥
ಅರಸನ ಆಜ್ಞೆಯ ಮೀರಿದ ।
ನರರೆಲ್ಲ ದಂಡಕೆ ಪಾತ್ರರಾಗುವ ತೆರದಿ ॥
ಗಿರಿಶನ ಅಪ್ಪಣೆ ತಪ್ಪಿದ ।
ನರಕುರಿಗಳಿಗೆಲ್ಲ ನರಕಪ್ರಾಪ್ತಿಯು ನೋಡೈ ॥ ೨೨ ॥
ನಳಿಕೆಯಲಿ ಶುನಕ ಪುಚ್ಛವ ।
ಕಳಕಳಿಯಿಂದಿಡಲು ಸರಳವಾಗುವುದೆಂತು? ॥
ಖಲಜನ ಹೃದಯಕೆ ಬೋಧಿಸೆ ।
ಸುಲಲಿತ ಗುಣಪುಟ್ಟುವುದೆಂತು? ಶಿವಾಧವಾ ॥ ೨೩ ॥
ಮಾತೃಪುಣ್ಯಾದಿ ಸುಶೀಲಂ ।
ಪಿತೃಪುಣ್ಯಾಂಶದಿಂದೆ ಚತುರತನ ನೋಡೈ ॥

ಮಾತೃದೋಷದುಸ್ಮೃತಂ ।
ಪಿತೃದೋಷದಿಂ ಮೂರ್ಖಂ ಶ್ರೀ ಶಿವಾಧವಾ ॥ ೨೪ ॥
ಸುಜನರ ಸಂಸರ್ಗವು ತಾಂ ।
ನಿಜವಾಗಿಯೂರ್ಧ್ವಸ್ಥಾನಕೊಯ್ಯುವ ತೆರದಿ ॥
ಕುಜನರ ಮಿತ್ರತ್ವವು ತಾಂ ।
ಸಹಜವಾಗಿಯಧೋಗತಿ ಗೀಡುಮಾಡುವುದು ॥ ೨೫ ॥

ದುಷ್ಟಗೆ ಮಾಡಿದ ಪುಣ್ಯಂ ।
ಕಷ್ಟವನ್ನು ಸದಾಕೊಡದೆ ಎಂದಿಗುಬಿಡದೂ ॥
ಶಿಷ್ಟಗೆ ಮಾಡಿದ ಪುಣ್ಯಂ ।
ಶ್ರೇಷ್ಠವಾದಗತಿ ಕೊಡುವುದು ಶ್ರೀ ಶಿವಾಧವಾ ॥ ೨೬ ॥

ಸುಗುಣದ ನರನಮೃತಂ ।
ಮಗುವಿನ ಮಾತೇ ಅತ್ಯಂತಾ ಮೃತನೋಡಂ ॥
ಲಗರಶರ ಸನ್ಮಾನಮೃತಂ ।
ರೋಗದಿ ಬೇಗನೆ ನೀಡಿದ ಭೋಜನವಮೃತಂ ॥ ೨೭ ॥

ಪಳಿಯಲ್ಬಲ್ಲಂ ಖಳತಾನ್ನೆ– ।
ಗಳಲ್ಬಲ್ಲನೆನವೀನ ಕಾವ್ಯವ ಧರೆಯೊಳ್ ॥
ಬೆಳಗುವ ರವಿಯುಂಗೂಗೆಯು ।
ಹಳಿಯುವುದಲ್ಲದೆ ಜಗವನೆಲ್ಲ ಬೆಳಗುವುದೇ? ॥ ೨೮ ॥

ಅರ್ಥವು ದುಃಖವ ಕೊಡುವದು ।
ವ್ಯರ್ಥವ ಹುದನ್ಯಾಯದಿಂದ ಗಳಿಸಿದ ಧನವೀ- ॥
ಸ್ವಾರ್ಥದಿ ದಾನವಮಾಡುತೆ ।
ಕೀರ್ತಿಸತಿಯು ಸ್ವರ್ಗವನು ಹೊಂದೈ ಮನುಜಾ ॥ ೨೯ ॥

ಹಂಚಿಕೆಯಿಂದಲಿ ಜನರನು ।
ವಂಚಿಸಿಯನ್ಯಾಯ ಮಾಡುವ ಭೂಪಾಲನಿಗೆ ॥
ಸಂಚಿತ ಪಾಪದಿಂದಲಿ ।
ಮುಂಚೆನರಕ ಬಳಿಕ ಮಲತಿಂಬ ಹುಳಾಗುವಂ ॥ ೩೦ ॥

ಗೆಳೆತನದಿಂದಿರುವವರನು ।
ತಿಳಿಯದೆ ಮೋಸವ ಮಾಡುವುದು ಜಾಣತನವೇ? ॥
ಮಲಗಿರುವವರನು ತೊಡೆಯಲಿ ।
ಫಳಿಲನೆ ಕೊಂದಿಕ್ಕಿಬಿಡುವುದು ಪೌರುಷವೇ? ॥ ೩೧ ॥

ಮಿತಿಮೀರಿದ ಮಾತಿನಿಂದಂ ।
ಅತಿರಯ ವಿಪರೀತವಾಗಿ ಪರಿಣಮಿಸುವುದು ॥
ಅತಿ ಪರಿಚಯವುಳ್ಳವಗಂ ।
ಸತತ ಬೇಸರನಾದ ರಾವಮಾನಂ ಸಹಜಂ ॥ ೩೨ ॥

ಇಂದ್ರಿಯ ನಿಗ್ರಹದಿನರಂ ।
ಸೌಂದರ್ಯದಿಂ ಕಳೆಯೇರಿ ದೃಢವಾಗಿರ್ಪಂ ॥
ಇಂದ್ರಿಯ ನಾಶದಿ ಪುರುಷಂ ।
ಕಂದಿ ಆಯುಷ್ಯದಿಂದ ಕ್ಷೀಣನಾಗುವನು ॥ ೩೩ ॥

ಲೋಕದಲಿ ಸರ್ವಜನಗಳ್ ।
ಸುಖರೂಪದಿಂ ಪರರದೋಷಗಳನೆಣಿಸುವರ್ ॥
ಶಾಕುಮತಿಯಿಂ ಕೂಡಿದಾ- ।
ನೇಕವಾದ ತಮ್ಮಪರಾಧಗಳನು ತೆಗೆಯರ್ ॥ ೩೪ ॥

ಸತ್ಯದಿ ನಡೆಯುವ ನರಗೆ ಜ- ।
ಗತ್ತಿನಲಿ ತಿರ್ಯಕ್ ಜಂತುಸಹಾಯಕವು ತಾಂ ॥
ಮಿಥ್ಯದಿ ನಡೆಯುವ ಮನುಜಗೆ ।
ಉತ್ತಮ ಸಹೋದರರು ವೈರಿಗಳಾಗುವರು ॥ ೩೫ ॥

ಯಂತ್ರದಲಿ ಸಿಕ್ಕ ಕಬ್ಬು ।
ಅಂತರಂಗದ ಹಾಲು ಕಳೆದು ಕೊಳ್ಳುವವೋಲ್ ಸ್ತ್ರೀ- ॥
ಯಂತ್ರದಲಿ ಸಿಕ್ಕ ಪುರುಷಂ ।
ಅಂತರಂಗದ ವೀರ್ಯವ ಕಳೆದುಕೊಳ್ಳುವನು ॥ ೩೬ ॥

ತುಂಟತನದಿಂ ದನ್ಯರ ।
ಗಂಟನ್ನೆತ್ತಿ ಹಾಕುವ ಮಾನವನು ಧರೆಯೊಳ್ ॥

ಬಂಟನೆಂದಿನಿಸಲಾರಂ ।
ತುಂಟತನದಿ ಕಡೆಗೆ ಸಂಕಟಕೆ ಗುರಿಯಾಗುವಂ ॥ ೩೭

ಮರೆಹೊಕ್ಕವರನು ಬಲದಿಂ ।
ಪೊರೆವಾತನೇ ಲೋಕದೊಳು ಪೂಜ್ಯನು ನೋಡಂ ॥
ಶರಣಾಗತರನು ಶೌರ್ಯದಿ ।
ಪೊರೆಯದವನತ್ಯಂತಧನು ನೋಡೈ ಶಿವನೇ ೩೮
ಹೆಂಡತಿಗಂಜುವ ಗಂಡಲ್ಲ ।
ಪುಂಡರಿಗಂಜುವನವ ಸಾಧುವಲ್ಲಂ ಜಗದೊಳ್ ॥
ಗುಂಡಿನಾರ್ಭಟವನೆಲ್ಲಂ ।
ಕಂಡು ಹೆದರುವದಾನೆಯಲ್ಲಂ ಶಿವಾಧವಾ ॥ ೩೯ ॥

ಬಡವರನು ಕಾಡಬೇಡಂ ।
ಸಿರಿವಂತರನು ಮೆಂದು ಸರಿಯು ಗಟ್ಟಿಲುಬೇಡ ॥
ನಡೆಯುಬೇಡ ನ್ಯಾಯದಿ ।
ಮರೆಯದಿರುಪಕಾರ ಗೈಯ್ದ ಮಿತ್ರರ ಮನ-ಜಾ ॥ ೪೦ ॥
ಗಾಯವುಶಸ್ತ್ರದ ಬೇಗನ ।
ಮಾಯದುಳಿದು ಲಗುಬಗೆಯಿಂದಲಿ ಶಬ್ದದಾ- ॥
ಗಾಯು ಕೆಲಕಾಲದಿಂದಂ ।
ಮಾಯುಲಾರದಾದ್ದರಿಂದ ವಿಚಾರದಿ ನುಡಿಯೈ ॥ ೪೧ ॥

ವಚನ ಕೊಡುವಾಗ ರಸನೆಯು ।
ಶುಚಿಯಾಗಿ ದೀರ್ಘವಾಗಿರ್ಪುದು ನೋಡದೇ- ॥
ವಚನ ಪಾಲಿಸುವ ಕಾಲಕ- ।
ಶುಚಿಯಾಗಿ ಕರವು ಕಿರಿದಾಗಿರ್ಪುದು ನೋಡೈ ॥ ೪೨ ॥
ಮರಿಯಾದೆಯು ಕಳಕೊಂಡು ।
ಚಿರಕಾಲ ಬಾಳುವುದಕ್ಕಿಂತಲು ಮೊದಲೇ ॥
ಗುರುತರ ಕೀರ್ತಿಯು ಗಳಿಸುತೆ ।
ಮರಣವನುಂ ಪೊಂದುವುದು ಜಗದೊಳತಿ ಲೇಸೈ ॥ ೪೩ ॥

ಹಳೆಬಟ್ಟೆಯ ಬಿಟ್ಟುನರಂ ।
ಥಳಿಲನೆ ಹೊಸ ಬಟ್ಟೆಯನ್ನು ಧರಿಸುವ ತೆರದಿ ॥
ಹಳೆ ದೇಹವ ಬಿಟ್ಟಾತ್ಮಂ ।
ಏಳಿಗೆಗಾಗಿ ಹೊಸದನ್ನಂಗೀಕರಿಸುವುದು ೪೪

ಪರಸ್ತ್ರೀ ಮಾತೆಯೆನ್ನುತ ।
ಪರರಿಂಗುಪಕಾರವನ್ನು ಮಾಡುತ್ತ ಜಗದೊಳ್ ॥
ವರವಚನ ಪಾಲಿಸುತ್ತೀ- ।
ತರದಿಂದ ನಡೆವ ಮನುಜರು ಶಿವನೊಳು ಬೆರೆವರ್ ೪೫

ಮಿತಿಯಿಂ ಮಾಡಿದ ಕಾರ್ಯಂ ।
ಸತತಂ ಸುಖವನ್ನು ಕೊಡುವುದೆಲೆಲೈ ನರನೇ ॥
ಮಿತಿಯಂ ಮೀರಿದ ಕರ್ಮಂ ।
ಅತಿಕಷ್ಟವ ಕೊಡದೆ ಬಿಡದು ಶ್ರೀ ಶಿವಾಧವಾ ॥ ೪೬ ॥

ದುಷ್ಟರ ಮನ್ನಣೆ ಪ್ರಥಮಂ ।
ಶಿಷ್ಟರಮನ್ನಣೆಯು ಬಳಿಕ ಗೈಯುವುದುಚಿತಂ ॥
ಪೃಷ್ಟಕ್ಷಾಲನ ಮೊದಲೊಳ್ ।
ಶ್ರೇಷ್ಠಮುಖಕ್ಷಾಲನಾವ ಶಿಷ್ಟಕ್ರಿಯೆ ತಾಂ ॥ ೪೭ ॥

ಗುರುಧರ್ಮಾಜ್ಞೆಯ ಮೀರಿದ ।
ನರಕುರಿಗಳಿಗೆಂತು ಪೋಗುನರಕಾನುಭವಂ? ॥
ಗುರುಸೇವಾ ತತ್ಪರರಹ ।
ವರಭಕ್ತರಿಗೆಂತು ಸಿಗದು ಕೈವಲ್ಯಪದಂ? ॥ ೪೮ ॥

ಲಿಂಗವ ಧರಿಸಿದ ಸರ್ವಂ ।
ಅಂಗವು ಶುಭಕರವೆಂದು ಶ್ರುತಿಯು ಸಾರುತ್ತಿಹುದು ॥
ಲಿಂಗವನಗಲಿದ ಅಂಗಂ ।
ಕಂಗೊಳಿಪುದು ಸ್ಮಶಾನ ಕಾಷ್ಠದ ತೆರದಿಂ ॥ ೪೯ ॥
ಶರೀರದೊಳು ಶಿರವು ಮುಖ್ಯಂ ।
ನರರೊಳು ಪರಮಾಚಾರ್ಯರವರಳಿ ಮುಖ್ಯಂ ॥

ಪುರದೊಳು ಶಿವಾಲಯ ಮುಖ್ಯಂ ।
ಪರಮಾತ್ಮನ ಪೂಜಿಪ ಭಕ್ತರತಿ ಮುಖ್ಯಂ ॥ ೫೦ ॥
ಆನೆಯನೇರಿದ ಪುರುಷಗೆ ।
ಶ್ವಾನನ ಭಯವಿಲ್ಲದಂತೆ ಪರಶಿವನಡಿಯಂ ॥
ಧ್ಯಾನಿಸುವಾತಗೆ ಭವಭಯ ।
ಏನೆಂದು ವಿಲ್ಲೆಂದೆಂದಿಗುಮಿದು ಸತ್ಯಂ ೫೧

ಭ್ರಮರಧ್ಯಾನದಿ ಕೀಟಂ ।
ಭ್ರಮರಸ್ವರೂಪವನ್ನೆ ಧರಿಸುವ ತೆರದಿಂ ॥
ನಾಮಧ್ಯಾನದ ಬಲದಿಂ ।
ಅಮರರಂಶವಂ ಪೊಂದುವರುನರರು ಜಗದೊಳ್ ೫೨

ನೊಣವು ದುರ್ಮಲದಿ ಕೂಡಿದ ।
ವ್ರಣವನ್ನತ್ಯಾದರದಿಂದ ಹುಡುಕುವ ತೆರದಿ ॥
ಗುಣಹೀನನಾದ ಧಮನು ತಾ ।
ಗುಣಿಗಳ ದೋಷವನೆ ಸತತ ನೋಡುತ್ತಿರ್ಪಂ ೫೩
ಕೊಡುವುದೇ ಮುಂದೆ ತನಗಂ ।
ನೋಡಿಡುವುದೇ ಪರರಿಗಲ್ಲನೆ ತನಗಿಲ್ಲಂ ।
ಕೊಡುವುದು ಕೆಡಕೆನಬೇಡಂ ।
ಕಡೆಯಮಾರ್ಗದ ಬುತ್ತಿಯು ನೋಡೈ ಶಿವನೇ ೫೪

ಅನ್ನದ ದಾನವಧಿಕವು ।
ಸನ್ನುತ ವಿದ್ಯಾದಾನಿವಕಿಂ ಮಿಗಿಲಾದುದು ॥
ಅನ್ನವು ಸದ್ಯಸ್ತೃಪ್ತಿಯು ।
ಉನ್ನತ ವಿದ್ಯೆಸದಾಸುಖವ ನೀವುದು ನೋಡೈ ೫೫

ಧರ್ಮವ ರಕ್ಷಿಸ ಮನುಜರಾ ।
ಧರ್ಮವೆ ಪೋಷಿಪುದು ನೋಡೈ ಸದಾಜಗದೊಳ್
ಧರ್ಮವನು ನಾಶಮಾಡುವ ।
ಕರ್ಮಿಯನಾ ಧರ್ಮವೆ ಹತವ ಮಾಡನೆಬಿಡದು ೫೬

ಶಮೀಕಾಷ್ಠದ ಗರ್ಭದೊಳ್ ।
ನೆಃಮದಿವಹ್ನಿಯು ವಿಶೇಷವಾಗಿರ್ಪಂತೆ ॥
ಪ್ರೇಮದಿ ಲಿಂಗದೊಡಲೊಳ್ ।
ಶ್ರೀಮಹಾದೇವನ ಕಲೆಯತಿಶಯವಾಗಿರ್ಪುದು ೫೭

ಪತಿಗಿಕ್ಕದ ಸುತರನುಂ ।
ಅತಿಕೋಪದಿ ಬೈದುಹೊಯ್ದು ಮನೆಒಡವೆಗಳಂ ।
ಸತತ ಪರರಿಗಿಕ್ಕಿ ಕೆಡಿಸುವ ।
ಸತಿಯನ್ನಾಳುತ್ತಿರ್ಪ ಪತಿಯು ಅತಿಭಂಡಂ ೫೮ ॥

ವಿದ್ಯೆಯು ಒಡಲೊಳಗಿರುವದು ।
ವಿದ್ಯೆಯು ತಾ ಭಾರವಲ್ಲ ಚೋರರು ಕದಿಯರ್ ।
ವಿದ್ಯೆಯನ್ನೃಪರು ಕೊಳ್ಳರು ।
ವಿದ್ಯೆಯೊಳು ಪಾಲುಬೇಡರು ಯಾರೂ ಎಂದೂ ೫೯

ಹಿರಿಯರ ಮಾತಂಕೇಳದೆ ।
ಗರವದಿ ತಿರುಗುತ್ತರ ಕೊಡುವ ಮಡದಿಮಕ್ಕಳ ॥
ಚಿರಕಾಲ ಬಾಳಕೆಗಿಂತಲು ।
ಪರದೇಶಾಗಿ ಮನೆಯ ಬಿಟ್ಟು ಹೋಹುದುಲೇಸು ೬೦

ಅಕ್ಕಿಯ ಮೇಲಿರುವ ಹೊಟ್ಟು ।
ತಿಕ್ಕಿಹಾಕಿದಮೇಲೆ ಪುನಃ ಹುಟ್ಟುವುದೆಂತು? ॥
ಪೊಕ್ಕ ಜೀವರನು ಮಲಗಳು ।
ದಿಕ್ಕೆಟ್ಟು ಪೋದಮೇಲೆ ಜೀವಪುಟ್ಟುವುದೆಂತು? ೬೧ ॥

ಮೃತನರನೊಡನೆ ಪ್ರೇಮದ ।
ಸತಿಸುತ ಒಡಹುಟ್ಟಿದವರಾರೂ ಪೋಗರ್ ॥
ಸತತಾಚರಿಸಿದ ಧರ್ಮವು ।
ಮೃತನಾದವನಾತ್ಮದೊಡನೆ ಪೋಗಿಗತಿಯಾಗುಂ ೬೨

ದೇವರು ಕೊಟ್ಟಿರುವನ್ನವ ।
ದೇವರಿಗರ್ಪಿಸದೆ ತಾನೆ ಭುಂಜಿಸುವಾತಂ ॥

ಕೇವಲ ಪಾಪಿಯುಮಲ್ಲದೆ ।
ಶಿವಕೃಪೆಗೆ ದೂರಾಗಿ ನರಕವಂ ಪೊಂದುವನು ೬೩
ಸುಂದರನೋರ್ವ ಸುಪುತ್ರನು ।
ಬಂಧುರವಂಶಕೆ ಭೂಷಣನೆನಿಸುತ್ತಿರುವಂ ॥
ಒಂದು ಸುವೃಕ್ಷದ ಪುಷ್ಪವು ।
ಅಂದಾದ ಕಾನನಕೆ ಶೋಭೆಯಾಗಿರ್ಪವೋಲ್ ೬೪
ಕರ್ಮಾನುಸಾರ ಜೀವನು ।
ಮರ್ಮವ ಹಿಡಿದು ದೇಹವ ಧರಿಸುವನಲ್ಲದೇ ॥
ಸುಮ್ಮನೆ ಶ್ರೀಪರಮಾತ್ಮನು ।
ಉರ್ವರೆಯೊಳ್ ಹೀನಜನ್ಮಕೆ ಪುಟ್ಟಿಸನೂ ॥ ೬೫ ॥

ಇತಿ ದ್ವಿತೀಯಕಲ್ಲೋಲಃ ಸಂಪೂರ್ಣಃ



ಶಿವೈಕ್ಯರಾದ



ಶ್ರೀ ೧೦೦೮ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾ
ಸ್ವಾಮಿಗಳವರು ಜಂಗಮವಾಡಿಮಠ ಶ್ರೀಕ್ಷೇತ್ರಕಾಶಿ

॥ ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ ॥

## ತೃತೀಯ ಕಲ್ಲೋಲವು



### ಗುರು ವಿಷಯಂ

ಕಂ॥ ಗುರುವರನಿನ್ನ ಮೈಮೆಯಂ ।
ಸುರರು ಬಣ್ಣಿಸಬಲ್ಲರೇ? ಅಮರ ಲೋಕದೊಳ್
ನರನಾಂ ಪೊಗಳಲ್ ಶಕ್ಯನೆ ।
ಪೊರೆಗುರು ಮುರುಗೇಶನಂ ಕರುಣದಿ ಸತತಂ ॥ ೧ ॥

ಕ-ಷ॥ ಹರನೆ ಗುರುರೂಪ । ಧರಿಸಿ ಭೂಮಿಯೊಳ್ ।
ಭರದಿಂದಾವ ತೆರಿಸಿದಾಗುರು ॥
ವರನು ಭಕ್ತರನು । ಕರುಣದಿ ತವಕದಿ ।
ಪೊರೆಯುವನು ಪೂಜ್ಯ ಪುಣ್ಯಾತ್ಮನು ॥ ೧ ॥

ಗುರುವು ಬಂದಕ್ಷಣ । ವರದೀಕ್ಷೆಮಾಡಿ ।
ಶರೀರದೊಳಗಿನ ಕ್ರೈಮುಳವನು ॥
ಪರಿಹರಿಸಿ ಬಳಿಕ । ಪರಮಲಿಂಗವಾ ।
ಧರಿಸಿಮಂತ್ರವಾ ಬೋಧಿಸಿದನು ॥ ೨ ॥

ಧರ್ಮದಾಚಾರ । ಮಾರ್ಗವ ತೋರಿಸಿ ।
ಕರ್ಮವನು ಸತ್ಕ್ರಿ ಮಾಡಿಸುತ ॥
ಸರ್ವನಿಯಮಗಳ । ತೋರಿಸಿ ಕೊಟ್ಟಾ- ॥
ಗುರುವರೇಣ್ಯನವನೇ ಶ್ರೇಷ್ಠನು ॥ ೩ ॥

ಗುರುವೆ ತಂದೆಯು । ಗುರುವೆ ತಾಯಿಯು ।
ಗುರುವೆ ಬಂಧು ಬಳಗವೆಲ್ಲವು ॥

ಗುರುವೆ ಬ್ರಹ್ಮವು । ಗುರುವೆ ವಿಷ್ಣುವು ।
ಗುರುವೆ ಸರ್ವರ ಕಲ್ಪವೃಕ್ಷವು
ಗುರು ಧ್ಯಾನಕೆ ಮೂಲ ! ಗುರು ಪೂಜೆಗೆ ಮೂಲ ।
ಗುರು ಸರ್ವವಿದ್ಯೆಗೆ ಮೂಲನು ॥
ಗುರು ಮಂತ್ರಕೆ ಮೂಲ । ಗುರು ಮೋಕ್ಷಕೆ ಮೂಲ ।
ಗುರುವರನೆ ಸರ್ವಕೆ ಮೂಲನು ೫



## ಸ್ತೋತ್ರಗಳು

ಏಕೆನ್ನಯಿಲ್ಲೀಮರತೀ । ಸಾಕಿನ್ನು ಶ್ರೀಗುರುಮೂರ್ತಿ ॥ಪಲ್ಲ॥
ನರಜನ್ಮಾಪರೂಪವೆಂದು ಕಳುವಿದಿರಂದು ।
ಪರಿಪರಿಯವಗುಣಗಳನು ಪರಿಹರಿಸುವುದೆಂದು? ॥
ಜರದು ಹೋಯಿತು ಕಾಯಶರಧಿ ಮಳಲಿನಂತೆ ।
ಕರವಿಡಿದು ಕರುಣಿಸೆನ್ನ ಮರೆಯಬೇಡಯ್ಯ ಸ್ವಾಮಿ ॥ ೧ ॥
ಬಹಳ ದಿವಸವಾಯಿತು ಭವಭವದಿ ನೊಂದು ।
ತಾಳಲಾರೆನು ತನುಮನವೆಂದು ಪೇಳಲಿನ್ನೆಂದು ॥
ಕಾಳಮದಿಂದ್ರಿಯಗಳಂ ಮೇಳೈಸಿ ಕೆಡಹಿಕೊಂಡು ।
ಏಳಲಾರದೆ ಬಿದ್ದೆ ಎತ್ತಿಕೊಳ್ಳಯ್ಯ ಸ್ವಾಮಿ ॥ ೨ ॥
ಮೂರುದಿನದ ಸಂತೆಮಾರ್ಗ ಮುಂದರಿಯದ ನಾನು ।
ಕಷ್ಟಬಿಟ್ಟೆನು ನಾನಾಪ್ರಕಾರ ಜನ್ಮಾಂತರ ॥
ಆರುವಿಲ್ಲವಯ್ಯ ಮುನ್ನದೂರ ಮಾಡದೆ ಯನ್ನಧೀರ ।
ಮುರುಗೇಶಗೆ ಮಹಾಲಿಂಗವನು ತೋರುಗೊಡಯ್ಯ ಸ್ವಾಮಿ ॥೩॥



ಗುರುನಾಥಾ ರಕ್ಷಿಸೋ । ಕರುಣಾ ಸಾಗರನೇ ॥ ಪಲ್ಲ ॥
ಸರ್ವಜೀವಾತ್ಮರ । ಸರ್ವದುರಿತಗಳ ।
ಪರಿಹರಿಸೆನುತ ನಿನ್ನ । ಮರೆಹೊಕ್ಕೆನು ದೇವಾ ॥ ೧ ॥
ಘೋರ ಸಂಸಾರದಿಂ । ಪಾರುಮಾಡೆನುತಲೀ ।
ವಾರಿಜಾಂಘ್ರಿಯುಗಕೆ । ಎರಗಿನಾ ಬೇಡಿಕೊಂಬೆ ॥ ೨ ॥

ಧರೆಯೊಳ್ ಕೋಣನ್ನೂರ । ಶ್ರೀ ಮುರುಗೇಶನ ।
ಚರಣ ಕಿಂಕರರನು । ಕರುಣದಿ ಸಲಹೋ



ಗುರುವರನೇ ನಾನು । ನರಜನ್ಮವೊಲ್ಲೇ ॥ ಪಲ್ಲ
ಪರಿಪರಿಯಿಂದಲಿ । ಬೇಡಿಕೊಳ್ಳುವೆ ನಿನ್ನ ॥ ಅನುಪಲ್ಲ
ನೀರಮೇಲಿನ ಗುಳ್ಳೆಯಂತೀ ಸಂಸಾರ ।
ಸಾರವಿಲ್ಲಿದರಲ್ಲೆಳ್ಳನಿತಾರ । ಸ್ಥಿರವಲ್ಲವು ಈ ಸಂಸಾರ
ಸ್ಥಿರವೆಂದು ಮೋಹಗೊಳಿಸಬೇಡ ೧
ಪಾಶದಿಂದಲಿ ಬಿಗಿದು ।
ಘಾಸಿಮಾಡುವ ಈ । ಹೇಸಿ ಸಂಸಾರಕೆ ।
ಏಸು ಕಾಲಕೆಯನ್ನ ಕೊಡಬೇಡ
ವೇಗದಿ ನಿನ್ನ ಕೃಪೆಯಾಗದಿರ್ದರೆ
ಸಿಗದು ಸ್ಥಿರಸೌಖ್ಯವುಯೆಂದೆಂದಿಗೂ ರಾಗದಿ ವರಮುರುಗೇಶನ
ಬೇಗನೆ ನೆನೆದರೆ ಭವರೋಗವಿಲ್ಲ ॥ ೩

§§§

ಶಂಕರ ಕಾಯೆಂಸದಾ । ಕಿಂಕರರನೆಲ್ಲಾ ॥ ಪಲ್ಲ ॥
ಸಂಕಟವನು ದೂಡುತ । ಭೋಂಕನೆ ಮನಸಿನ ।
ಬಿಂಕವ ಬಿಡಿಸುತ । ಅಂಕಿತದೊಳಗಿರಿಸಿ ॥ ೧ ॥
ಪರತರ ಶಿವನೇ । ಗುರುಚರ ನೆನಿಸಿ ।
ನಿರುತದಿ ಸಂಚರಿಸಿ । ಪರಿಸರಿ ಪಾಲಿಸಿ ॥ ೨ ॥
ಸಾಭಾರಿಯು ನೀನೆ ನಿ । ರಾಭಾರಿ ಸಕಲ ನೀನೆ ।
ಲೋಭಾದಿಗಳ ನಳಿದು । ಲಾಭಾದಿಗಳ ನುಳಿದು ॥ ೩ ॥
ದೀಕ್ಷಾಗುರುವು ನೀನೆ । ಶಿಕ್ಷಾಗುರುವು ನೀನೆ ।
ಮೋಕ್ಷಾಗುರುವು ನೀನೆ । ದಕ್ಷನಶಿರ ಹರದವ ನೀನೆ ॥ ೪ ॥
ಕಾಮಹರನು ನೀನೆ । ಸೋಮಧರನು ನೀನೆ ।
ಪ್ರೇಮದಿ ಮುರುಗೇಶನ । ನಾಮವ ಭಜಿಸುವೆ ॥ ೫ ॥

‡‡‡

ಗುರುವೆ ಗುರುವೆ ಪರಮ ಗುರುವೇ ।
ನಾವು ತರುಳರ್ಸೈ ರಕ್ಷಿಸೆಮ್ಮನು ॥ ಪಲ್ಲ ॥
ಚರಣಕೆರಗುವೆವೈ । ಕರುಣಸಾಗರಾ ।
ಕರುಣದಿಂದೆಲೈ । ಭರದಿ ಮತಿವರ್ಧಿಸೈ ॥ ೧ ॥
ದೀನಬಂಧುವೆ । ಜ್ಞಾನಸಿಂಧುವೆ ।
ಹೀನಗುಣ ನೋಡದೆ । ಮಾನವನು ಕೊಡೈ
ನಿನ್ನ ನಾಮದಲ್ಲಿ । ಎನ್ನಮನ ಗಟ್ಟಿಯಾಗಿ ।
ನೆನೆಸುವಂತೆ ಮಾಡಿ । ಉನ್ನತ ಪದವಿಕೊಡೈ ೩

†‡†

ಜಪಿಸು ಜಪಿಸು ಪಂಚಾಕ್ಷರಿಯಂ ।
ವಿಪುಳ ಶಿವಜ್ಞಾನದ ಶಿರಿಯಂ ಪಲ್ಲ
ವೇದಾಗಮಕುಲದಧಿ ಪತಿಯಂ ।
ನಾದಬ್ರಹ್ಮದ ಗತಿಮತಿಯಂ । ಆದಿಯ ಶಿವಪಥದಧಿ ಪತಿಯಂ ।
ಮಾದೇವರ ಸುಖದುನ್ನತಿಯಂ ॥ ೧ ॥
ಹರಿಬೊಮ್ಮರ ಹರಣದ ಕಣಿಯಂ ।
ಪರಮಾಮೃತಸಾರದ ಮಳೆಯಂ । ವರಮುನಿಗಳ ಮೋಕ್ಷದ
ಬೆಳೆಯಂ । ಹರಶರಣರ ಕಂಪಿನ ಕಳೆಯಂ ॥ ೨ ॥
ಅರಿಷಡ್ವರ್ಗ ವಿನಾಶನಮಂ ।
ಗುರುಚರಲಿಂಗ ನಿವಾಸನಮಂ । ಪರಮರಹಸ್ಯದ ಶಾಸನಮಂ ।
ಶರಣರ ಮನದ ವಿಕಾಶನಮಂ ॥ ೩ ॥
ಅವಿರಳ ಯಂತ್ರಚ ಯಗ್ರಣಿಯಂ ।
ಪ್ರವಿಮಳ ಮಂತ್ರ ಶಿಖಾಮಣಿಯಂ । ಸವಿಮತ ಶಿವಮಂತ್ರದ
ಕಣಿಯಂ । ಭವಭಯ ದುರಿತಗಜಾ ಶೃಣಿಯಂ ॥ ೪ ॥
ಸುಜನಕಾಯ ಮನೋಶೃಣಿ ಮುದಮಂ ।
ರಜತಮಸತ್ವ ಗುಣೌಷಧಮಂ । ನಿಜವರ ಗುರುಶಿದ್ಧನ ಪದವಂ ।
ಭಜಿಸಿ ನೀತ್ಯಜಿಸುಭವಬಂಧನಮಂ ॥ ೫ ॥

## ಪ್ರಭೆಗೆ ಜಯವಾಗಲಿ

ಜೈಪ್ರಭೆಯೆ ಜೈಪ್ರಭೆಯೆ ಜಯಶಾಲಿ ಪ್ರಭೆಯೆ ।
ಪಂಚಾನನ ಪ್ರಭೆಯೆ ಪಂಚಾಕ್ಷರ ಪ್ರಭೆಯೆ ಪಂಚಾಚಾರ್ಯ
ಪ್ರಭೆಯೆ ॥

ಎಲ್ಲಿ ನೋಡಿದಡಲ್ಲಿ ನಿನ್ನ ನಾಮವೇ ನಾಮ ।
ಎಲ್ಲಿ ನೋಡಿದಡಲ್ಲಿ ನಿನ್ನ ಧ್ಯಾನವೇ ಧ್ಯಾನ ।
ಎಲ್ಲಿ ನೋಡಿದಡಲ್ಲಿ ನಿನ್ನ ಮಾನವೇ ಮಾನ ।
ಎಲ್ಲಿ ನೋಡಿದಡಲ್ಲಿ ನಿನ್ನ ಕೀರ್ತಿಯೇ ಕೀರ್ತಿ ।
ಎಲ್ಲಿ ನೋಡಿದಡಲ್ಲಿ ನಿನ್ನ ವಾರ್ತೆಯೇ ವಾರ್ತೆ ।
ಎಲ್ಲಿ ನೋಡಿದಡಲ್ಲಿ ನಿನ್ನ ಪ್ರಭೆಯೇ ಪ್ರಭೆಯು ।
ಜೈಪ್ರಭೆಯೆ ಜೈಪ್ರಭೆಯೆ ಜಯಶಾಲಿ ಪ್ರಭೆಯೆ ॥ ೧ ॥

ನಿನ್ನ ದರ್ಶನ ಮಾಡೆ ನೇತ್ರ ಪಾವನವಹುದು ।
ನಿನ್ನ ಸ್ಪರ್ಶನ ಮಾಡೆ ಕರವು ಪಾವನವಹುದು ।
ನಿನ್ನ ಪಠನವ ಮಾಡೆ ರಸನೆ ಪಾವನವಹುದು ।
ನಿನ್ನ ನಾಮವ ಕೇಳೆ ಶ್ರೋತ್ರ ಪಾವನವಹುದು ।
ನಿನ್ನ ಧ್ಯಾನವ ಮಾಡೆ ಮನವು ಪಾವನವಹುದು ।
ನಿನ್ನಿಂದ ಗುರುವಂಶ ಜಗದಿ ಬೆಳಕಿಗೆ ಬಂತು ।
ನಿನ್ನಿಂದ ಮತತತ್ತ್ವ ಸರ್ವತ್ರ ಪಸರಿಸಿತು ।
ಜೈಪ್ರಭೆಯೆ ಜೈಪ್ರಭೆಯೆ ಎನ್ನಾತ್ಮ ಪ್ರಭೆಯೆ ॥ ೨ ॥

ನೀ ಬಂದೆ ಎನಲೆನ್ನ ಮನಕೆ ಮುದವಾಗುವದು ।
ನೀ ಬಂದೆ ಎನಲೆನ್ನ ಮುಖಕೆ ಕಳೆಯೇರುವದು ।
ನೀ ಬಂದೆ ಎನಲೆನ್ನ ಮೈ ಉಬ್ಬಿ ಹೋಗುವದು ।
ನೀ ಬಂದೆ ಎನಲೆನ್ನ ಪ್ರೇಮ ಉಕ್ಕೇರುವದು ।
ಧರ್ಮ ಮರ್ಮವ ಸಾರಿ ಧರ್ಮ ಜಾಗ್ರತಿಗೈದ ।
ಧರ್ಮಮೂರ್ತಿಯೆ ಪ್ರಭೆಯೆ ಚಿರಕಾಲ ಬಾಳು ।
ಜೈಪ್ರಭೆಯೆ ಜೈಪ್ರಭೆಯೆ ಎನ್ನ ಪ್ರೀತಿಯ ಪ್ರಭೆಯೆ ॥ ೩ ॥

## ಮಂಗಳಂ

ಎತ್ತುವೆನಾರತಿ ಎತ್ತುವೆನಾರತಿಯನಾ ।
ಚಿತ್ತಾನಂದ ಗುರು ವಿಶ್ವಾರಾಧ್ಯನಿಗೆ ॥ ಪಲ್ಲ
ತನುವ ತಳಿಗಿ ಮಾಡಿ । ಮನವ ಆರತಿಯಿಟ್ಟು ।
ಮನದ ಕೊನೆಯೊಳು । ವಿಷಯ ದೀಪಹಚ್ಚಿ ॥ ೧
ಉನ್ಮನಿಜ್ಯೋತಿಯ ಬೆಳಕಿಲಿ । ರನ್ನದಾರುತಿಯಾ ತುಂಬಿ ।
ಸನ್ಮತದಿಂ ಬೇಗ ಮೆನಾ । ಚಿನ್ಮಯ ವಿಶ್ವಾರಾಧ್ಯನಿಗೆ ॥ ೨ ।
ನಾನು ನೀನೆಂಪೆಂಬ । ಮನದ ಭೇದವನಟ್ಟು ।
ನಾನಾ ತರಹದ । ಭಾನುಪ್ರಕಾಶ ವಿಶ್ವಾರಾಧ್ಯನಿಗೆ ॥ ೩ ॥

ಕರ್ಪೂರಾರತಿ ಬೆಳಗಿರಿ ಶಿವಗೆ ।
ಸರ್ಪಭೂಷಣ ಕಪ್ಪ ಗೊರಳನಿಗೆ ॥ ಪಲ್ಲ
ಮರುಚರಲೀಲ ಕರಕಪಾಲಗೆ । ಮುಪ್ಪುರ ಸಂಹರಿಸಿದ
ಭವಹರಗೆ । ಸುರಮುನಿವಂದಿತ ಚರಣಗೆ ।
ಪರತರ ಪಾರ್ವತಿ ವಲ್ಲಭಗೆ ॥ ೧ ॥
ಅದ್ರಿಚಾಪಭದ್ರರೂಪಗೆ । ರುದ್ರ ವೀರಭದ್ರ
ತಾತಗೆ । ಕ್ಷುದ್ರದೈತ್ಯರ ಸಂಹಾರಗೆ ।
ರುದ್ರಾವತಾರ ಮೂರ್ತಿಗೆ ॥ ೨ ॥
ಹರಿಬ್ರಹ್ಮರ ಗರ್ವನಾಶಗೆ । ಪರವ ದುರಿತಗಳ
ಪರಿಹರಗೆ । ಧರೆಯೊಳು ಕೊಣ್ಣೂರ ವಾಸಗೆ ।
ಮುರುಗರಾಜಪತಿ ಶಂಕರಗೆ ॥ ೩

ಇತಿ ತೃತೀಯ ಕಲ್ಲೋಲಃ ಸಂಪೂರ್ಣಃ

# ಚಂದ್ರ ಸೂರ್ಯರ ಗ್ರಹಣ ಕಾಲದಲ್ಲಿ ನಡೆಯತಕ್ಕ ಮುಖ್ಯ ನಿಯಮಗಳು

ಸೂರ್ಯೇಂದುಗ್ರಹಣಂ ಯಾವತ್ತಾವತ್ಕುರ್ಯಾಜ್ಜಪಾದಿಕಂ ।
ನಸ್ವಪ್ಯಾನ್ನಚ ಭುಂಜೀತ ಸ್ನಾತ್ವಾ ಭುಂಜೀತ ಮುಕ್ತಯೋಃ ॥
ಅವಿಮುಕ್ತೇ ಕರಣೌ ಗ್ರಸ್ತಾವಸ್ತಂಗತೌ ಯದಾ ।
ದೃಷ್ಟ್ವಾ ತದಾ ಪರದಿನೇ ಸ್ನಾತ್ವಾ ಭುಂಜೀತ ವಾಗ್ಯತಃ ॥
ದೇವಾರ್ಚನಾದಿ ಕರ್ತವ್ಯಂ ಕಾರ್ಯಂ ದೀಕ್ಷಾನ್ವಿತೈಃ ಸದಾ ।
ಪೌರ್ಣಮಾಸ್ಯಾಮಮಾವಾಸ್ಯಾಂ ಗ್ರಹಣೇ ಚಂದ್ರ ಸೂರ್ಯಯೋಃ ॥
ಪಂಚಾಮೃತೈಃ ಸುಸಂಸ್ನಾಪ್ಯ ಲಿಂಗಮೂರ್ತಿ ಧರಂ ಹರಂ ।
ಪೂಜಯಿತ್ವಾ ವಿಧಾನೇನ ಸರ್ವಪಾಪೈಃ ಪ್ರಮುಚ್ಯತೇ ॥

ಅಂದರೆ:— ಚಂದ್ರಸೂರ್ಯರಿಗೆ ಗ್ರಹಣವು ಸಂಭವಿಸಿದ ಕಾಲದಲ್ಲಿ ಎಲ್ಲಿಯವರೆಗೆ ಗ್ರಹಣವಿರುತ್ತದೆಯೋ ಅಲ್ಲಿಯವರೆಗೆ ಜಪಾದಿಗಳನ್ನು ಮಾಡಬೇಕೆಂತಲೂ, ಆ ಕಾಲದಲ್ಲಿ ಮಲಗಬಾರದೆಂತಲೂ, ಭೋಜನವನ್ನು ಮಾಡಬಾರದೆಂತಲೂ, ಬಿಟ್ಟನಂತರ ಸ್ನಾನವನ್ನು ಮಾಡಿ ಭೋಜನವನ್ನು ಮಾಡಬೇಕೆಂತಲೂ, ಹಿಡಿದುಕೊಂಡೇ ಮುಳುಗಿದರೆ ಮರುದಿವಸ ಹಿಡಿದ ಸೂರ್ಯನನ್ನೇ ಆಗಲಿ ಅಥವಾ ಚಂದ್ರನನ್ನೇ ಆಗಲಿ ನೋಡಿ ಸ್ನಾನವನ್ನು ಮಾಡಿಕೊಂಡು ಮೌನಿಯಾಗಿ ಭೋಜನವನ್ನು ಮಾಡಬೇಕೆಂತಲೂ, ದೀಕ್ಷಾಬದ್ಧರು ಗ್ರಹಣ ಕಾಲಕ್ಕೆ ಶಿವಪೂಜಾದಿಗಳನ್ನು ಮಾಡಬೇಕೆಂತಲೂ, ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಚಂದ್ರಸೂರ್ಯರಿಗೆ ಗ್ರಹಣವು ಸಂಭವಿಸಿದಾಗ್ಯೆ ಲಿಂಗರೂಪಧರನಾದ ಶಿವನನ್ನು ಯಾವನು ವಿಧಿಪೂರ್ವಕವಾಗಿ ಪಂಚಾಮೃತಗಳಿಂದ ಅಭಿಷೇಕಮಾಡಿ ಪೂಜಿಸುವನೋ ಅವನು ಸರ್ವಪಾಪಗಳಿಂದ ಬಿಡುಗಡೆಯನ್ನು ಹೊಂದುವನೆಂತಲೂ ಧರ್ಮಶಾಸ್ತ್ರಗಳು ಸಾರಿಸಾರಿ ಹೇಳುವದರಿಂದ ಗ್ರಹಣ ಕಾಲದಲ್ಲಿ ಪೂಜಾ ಜಪಾದಿಗಳಲ್ಲಿ ತೊಡಗಿರಬೇಕಲ್ಲದೆ ಅನ್ಯಕಾರ್ಯಗಳಲ್ಲಿ ತೊಡಗಬಾರದು.

ಗ್ರಹಣ ಕಾಲದಲ್ಲಿ ದಾನಮಾಡುವದು ಬಹು ಪುಣ್ಯಕರವಾಗಿರುವದರಿಂದ ಆಗ್ಗೆ ಗೋ-ಭೂಮಿ-ಹಿರಣ್ಯಾದಿಗಳನ್ನು ದಾನಮಾಡಬೇಕು, ಗ್ರಹಣ ಕಾಲದಲ್ಲಿದ್ದ ನೀರನ್ನು ಉಪಯೋಗಿಸಬಾರದು. ಗ್ರಹಣ ಬಿಟ್ಟನಂತರ ಸರ್ವವನ್ನು ತೊಳೆದು ಬಳಿದು ಹೊಸನೀರನ್ನು ಮಡಿಯಿಂದ ತಂದು ಶಿವಪೂಜಾದಿ ನಿತ್ಯಕರ್ಮವನ್ನು ತೀರಿಸಿಕೊಂಡು ಪಾಕಾದಿಗಳನ್ನು ಮಾಡಿ ಊಟವನ್ನು ಮಾಡಬೇಕು.

ವೀರಶೈವಾಚಾರವಿಧಿ

ಓಂ ಶಾಂತಿಃ! ಶಾಂತಿಃ!! ಶಾಂತಿಃ!!!

ಶಿವೈಕ್ಯರಾದ



ಷ|| ಬ್ರ|| ಗುರುಸಿದ್ಧಲಿಂಗ ಶಿವಾಚಾರ್ಯರ ಸ್ವಾಮಿಗಳವ

ಬೃಹನ್ಮಠ ಕೊಟ್ಟೂರ

ಶ್ರೀ

# "ನೀತಿ ಪದ್ಯ ಗೇಯಮಂಜರಿಗೆ" ಉದಾರ

## ಹಸ್ತದಿಂದ ಸಹಾಯ ನೀಡಿದ ಮಹನೀಯರು

### ೨೫ ರೂ. ಗಳ ದಾತೃಗಳು

ಶ್ರೀ ಶಂ, ಸ್ವಾಮಿ. ಗುರು ಶಿ. ಸ್ವಾಮಿ ಪತ್ರಿವನ ನರಗುಂದ (ವಾಗ್ದಾನ)
,, ಹಾಗಯ್ಯ ಮಠದ ಫ್ರೀ ಬೋರ್ಡಿಂಗಿನ ಕ್ಲಾರ್ಕ ,,
,, ಭ. ಚ. ವಸ್ತ್ರದ ಸರಪಂಚ ಶಿರೋಳ ,,
,, ವಿ ಎಮ್. ನವಣಿ ಗುಲಬರ್ಗಾ ,,
,, ಎಲ್. ಬಿ. ಕುಲಕರ್ಣಿ ಚಿಕ್ಕನರಗುಂದ
,, ಸಿ. ಬಿ. ಮುಲ್ಕೀಪಾಟೀಲ .. (ವಾಗ್ದಾನ)

### ೧೦ ರೂ. ಗಳ ದಾತೃಗಳು

ಶ್ರೀಮತಿ ಶಾಂತವ್ವನವರು ಕಣಬೂರಗಿಮಠ ಮು. ಜಕನೂರ
ಶ್ರೀ ಭದ್ರಗೌಡರು ಪಾಟೀಲ ,,
,, ವೀರಣ್ಣಾ ಬಸವಯ್ಯ ಅಂಗಡಿ ,,
,, ಗುರುಸಿದ್ಧಯ್ಯ ನರೇಂದ್ರಮಠ ಮು. ಕೌ. ಹುಬ್ಬಳ್ಳಿ
,, ಶಿವರುದ್ರಪ್ಪ ಸಂಗಪ್ಪ ದಂಡಿನ ನೀರಲಗಿ
,, ಎ. ಶಿ. ಕುರ್ಲಗೇರಿ ಮಾಸ್ತರ ಕುರಗೋವಿನಕೊಪ್ಪ (ವಾಗ್ದಾನ)
,, ವೀರಪ್ಪ ಮೆಣಸಿಗಿ ಕೆರೂರ
ಬಸವಂತಪ್ಪ ಲಿಂಗಪ್ಪ ಹೊಂಗಲ ಚಿಕ್ಕನರಗುಂದ
,, ಸಿದ್ಧಪ್ಪ ಶಿದ್ಲಿಂಗಪ್ಪ ಗವಿ ,,
,, ಗೂಳಪ್ಪ ಶಿವಪ್ಪ ಸಾಲೋಟಗಿ ,, (ವಾಗ್ದಾನ)
,, ಬಸಲಿಂಗಪ್ಪ ಬಸೆಟ್ಟೆಪ್ಪ ಜ್ಯಾಳಿ ಹಿರೇಕೊಪ್ಪ

ಶ್ರೀ ಬಸನಗೌಡ್ರು ನೀಲಪ್ಪಗೌಡ್ರು ಪಾಟೀಲ ಗಾಡಗೋಳ್ಳಿ
,, ಅಯ್ಯಪ್ಪ ಸೋಮಪ್ಪ ಸಜ್ಜನರ ಅ। ಡೆ। ಇ। ಧಾರವಾಡ
,, ವೆಂಕಪ್ಪ ಸಕ್ರಿ ಹೊಳೆ–ಆಲೂರ
,, ವೀರಪ್ಪ ಮುದ್ನೂರ ,,

## ರೂ. ಗಳ ದಾತೃಗಳು

,, ಚ. ಚ. ಪಂಚಗೃಹ ಗು. ಹಿರೇಮಠ ನರಗುಂದ
,, ಸಿ. ಎಸ್. ಹಿರೇಮಠ ಸುಪ್ರವಾಯಿಜರ ,,
,, ವಿ. ವಿ. ಅಂಗಡಿ ವಕೀಲರು ಚಕನೂರ
,, ಲಾ. ಮ. ವಂಟಮುರಿಮಠ ಗೋಕಾಕ
,, ರಾಚಯ್ಯಾ ಮಠದ ಕಪ್ಪಲಿ
,, ಸಿ. ವೀ, ವಿರಕ್ತಮಠ ಶಾಳಾಮಾಸ್ತರ ಕೊತಬಾಳ
,, ಮಹಾಂತಯ್ಯಾ ಮುದೇನೂರಮಠ ನಂದವಾಡಿಗಿ. (ವಾಗ್ದಾನ)
,, ಅಂದಾನಯ್ಯಾ ಸಿದ್ದಯ್ಯಾ ವಸ್ತ್ರದ ಮಲ್ಲಾಪೂರ ,,
,, ನಾ. ಬ. ಕೊಂಗವಾಡ ಹಿರೇಮಠ ಬೆನಕೊಪ್ಪ ,,
,, ಗುರುಬಸಯ್ಯಾ ಗೂಳಯ್ಯಾ ದಳವಾಯಿ ಮುದಕವ್ವಿ
,, ನಾಗಯ್ಯಾ ರೇವಣಯ್ಯಾ ಹಿರೇಮಠ ,, (ವಾಗ್ದಾನ)
,, ರೇವಯ್ಯಾ ಶಿವಯ್ಯಾ ಹಿರೇಮಠ ಹಿರೇಮೂಲಂಗಿ
,, ಚನಬಸಯ್ಯಾ ರಾಚಯ್ಯಾ ಸಾಲಿಮಠ ಹೆಬ್ಬಳ್ಳಿ
,, ಚನ್ನಯ್ಯಾ ಸಂಗಯ್ಯಾ ಹಿಟ್ಟಿನಮಠ ಹೊಳೆ–ಆಲೂರ
,, ರೇವಣಸಿದ್ದಯ್ಯಾ ಬಿಕ್ಷಾವತಿ ಹಿರೇಮಠ ,,
,, ವೀರಭದ್ರಪ್ಪ ತಿಪ್ಪಣ್ಣಾ ಹೂಗಾರ ,,
ಶ್ರೀಮತಿ ಮಲ್ಲಮ್ಮಾ ಭೂಸನೂರ ತಮಿನಾಳ
ಶ್ರೀ ಬ. ಬ. ಮಠಪತಿ ಚಿಕ್ಕನರಗುಂದ
,, ಮಲ್ಲಪ್ಪ ಪರಪ್ಪ ತೊರಗಲ್ ,,
,, ಶಿವಪ್ಪ ರುದ್ರಪ್ಪ ಸಾತಣ್ಣಾವರ ,,

ಶ್ರೀ ಭೀಮಪ್ಪ ರಾಯಪ್ಪ ಶಿವರಡ್ಡಿ
,, ಚನಬಸಪ್ಪ ಅಯ್ಯಪ್ಪ ಹೆಬ್ಬಾಳ
,, ಶಿವಪ್ಪ ಮಲ್ಲಪ್ಪ ಕುಲಕರ್ಣಿ
,, ವೀರಪ್ಪ ಫಕೀರಪ್ಪ ಹೊಂಗಲ
,, ಬಸಪ್ಪ ವೀರಪ್ಪ ಸಪ್ಪಡ್ಲ (ವಾಗ್ದಾನ
,, ಪರಪ್ಪ ಚನ್ನಪ್ಪ ತಡಹಾಳ ,,
,, ವಿ. ಎಮ್. ಕಟಗೇರಿ ನರಗುಂದ
,, ಶಂ. ನೀಲವಾಣಿ ಶಾಳಾ ಹೆಡ್‌ಮಾಸ್ತರ ,,
,, ರುದ್ರಪ್ಪ ಶಿವಪ್ಪ ನವಲಗುಂದ ,,
,, ಪ್ರಭಪ್ಪ ವೀರಪ್ಪ ಉಪ್ಪಿನ ಸುರೇಬಾನ
,, ಗದಿಗೆಪ್ಪ ಬಸಪ್ಪ ಹಂಚಿ ಹಿರೇಮೂಲಂಗಿ
,, ಬಸೆಟ್ಟೆಪ್ಪ ಬಸಪ್ಪ ದುಂಡಪ್ಪನವರ ,,
,, ಬಸಪ್ಪ ಸಿದ್ದಪ್ಪ ಗವಿ ಕಲಾಳ (ವಾಗ್ದಾನ)
,, ಮ. ಗು ದಾನಪ್ಪಗೌಡರ ಬೆನಕೊಪ್ಪ ,,
,, ನೀಲಕಂಠಪ್ಪ ಚಂಗಳಿ ಶಿರೋಳ ,,
,, ಪರಪ್ಪ ಶಿದ್ಲಿಂಗಪ್ಪ ಚವಡಿ ಕೋಟುಮಚಗಿ
,, ಡಾ, ಪಿ. ಎ. ಅಂಕಲಗಿ ಎಸ್. ಎಮ್. ಪಿ. ಹೂಲಿ
,, ಬಸಪ್ಪ ಸಂಗಪ್ಪ ಹುರಕಡ್ಲಿ ಗೋವನಕೊಪ್ಪ (ವಾಗ್ದಾ
,, ಗೌಡಪ್ಪಗೌಡಾ ಭೀಮನಗೌಡಾ ಹಿರೇಗೌಡ್ರ ವೆಣಸಿಗಿ
,, ಹನಮಂತಗೌಡಾ ಬಸನಗೌಡಾ ಹಿರೇಗೌಡ್ರ ನೀರಲಗಿ
ಶಂಕರರಾಜ ವೀರಬಸಪ್ಪ ಸೊಬರದ ಕೊಣ್ಣೂರ (ವಾಗ್ದಾನ)
ಪರಪ್ಪ ಶಿವಪ್ಪ ವಾಲಿ ,,
ಹನಮಪ್ಪ ಭೀಮಪ್ಪ ಕಾತರಕಿ ಹೊಳೆ–ಆಲೂರ
ಮಲ್ಲಪ್ಪ ಅಂದಾನಪ್ಪ ಪಟ್ಟಣಶೆಟ್ಟಿ ,,
ಲಿಂಗಪ್ಪ ರುದ್ರಪ್ಪ ಬಾದಾಮಿ ,,
ಬಾಳಪ್ಪ ಭೀಮಪ್ಪ ಬಡಿಗೇರ ,,

ಶ್ರೀ ವೀರಭದ್ರಪ್ಪ ಮಲ್ಲೇಶಪ್ಪ ಯಾಪಗಲ್ ,,
,, ಗುರಪ್ಪ ರುದ್ರಪ್ಪ ಬಣದಾಮಿ ,,
,, ರಾಚೋಟೆಪ್ಪ ಲೋಕಪ್ಪ ಕಂಬಿ ,,
,, ಬಸಲಿಂಗಪ್ಪ ಬಸೆಟ್ಟೆಪ್ಪ ಸಾಸಲ್ಲಿ ,,
,, ಚನ್ನಪ್ಪ ಗುರಪ್ಪ ಬೀರನೂರ ,,
,, ಚನಬಸಪ್ಪ ಮಾಗುಂಡಪ್ಪ ಹೂಗಾರ ,,
,, ಎಚ್ಚರಪ್ಪ ಶಿದ್ದಪ್ಪ ಯಾದವಾಡ ,,
,, ಗುರುಸಿದ್ದಪ್ಪ ಕಲ್ಯಾಣಿ ,,

**ಸೂಚನೆ—** ಈ ಗ್ರಂಥ ಮುದ್ರಣಕ್ಕಾಗಿ ವಾಗ್ದಾನ ಮಾಡಿರುವವರು ಶೀಘ್ರವಾಗಿ ತಮ್ಮ ಸಹಾಯ ಧನವನ್ನು ಷ॥ ಬ್ರ॥ ಶ್ರೀ ಪಟ್ಟದ ಸ್ವಾಮಿಗಳು ಹಿರೇಮಠ ಮು. ಕೊಣ್ಣೂರ ವ್ಹಾಯಾ- ಹೊಳೆ-ಆಲೂರ (ಜಿ. ಧಾರವಾಡ) ಎಂಬ ವಿಳಾಸಕ್ಕೆ ಕಳುಹಿಸಿ ಶ್ರೀ ಗುರುಕೃಪೆಗೆ ಪಾತ್ರರಾಗಬೇಕೆಂದು ಹಾರೈಸುತ್ತೇವೆ.

ಇತಿ ಶಿವಂ

